


Third त्रितिया वार्षिका Administrative वरदि report

# ತೃತೀಯ ವಾರ್ಷಿಕ ಆಡಳಿತ ವರದಿ

# 1989-90



Mysore Zilla Parishad

## ಮೈಸೂರು ಜಿಲ್ಲಾ ಪರಿಷತ್

## ಮೈಸೂರು




# ತೃತೀಯ ವಾರ್ಷಿಕ ಆಡಳಿತ ವರದಿ

## 1989--90

### ಜಿಲ್ಲಾ ಪರಿಷತ್, ಮೈಸೂರು

24/10/96 CH Could you find the foll. info^n
- Total annual budget of Mysore ZP – 1989-90, 1988-89, 1987-88.
- Amount and percentage of budget for health, education and all other subjects.
- Do they give the distribution to the different taluks – for health budget or for total ZP budget. TN

## ವಿ ಷ ಯ ಸೂ ಚಿ

ಪುಟ ಸಂಖ್ಯೆ

# ಮುನ್ನುಡಿ

1989–90ನೇ ಸಾಲಿನ ಮೈಸೂರು ಜಿಲ್ಲಾ ಪರಿಷತ್ ಆಡಳಿತ ವರದಿಯನ್ನು ಮಂಡಿಸಲು ನನಗೆ ಅತ್ಯಂತ ಸಂತೋಷದ ಸಂಗತಿ ಆಗಿದೆ. ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದ ನಂತರ ಇದು ಮೂರನೆಯ ಆಡಳಿತ ವರದಿಯಾಗಿದ್ದು ಈ ವರ್ಷದಲ್ಲಿ ವಿವಿಧ ಯೋಜನೆಗಳಲ್ಲಿ ಗಣನೀಯ ಮಟ್ಟದಲ್ಲಿ ಪ್ರಗತಿಯನ್ನು ಸಾಧಿಸಲಾಗಿದ್ದು ಅವುಗಳ ಒಂದು ಪಕ್ಷಿ ನೋಟವನ್ನು ತಮ್ಮ ಮುಂದಿಡಲು ಇಚ್ಛೆಪಡುತ್ತೇನೆ.

ಕಳೆದ ವರ್ಷದಲ್ಲಿ ಸಾರ್ವಜನಿಕ ಆರೋಗ್ಯಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಯಿತು. ಗ್ರಾಮಾಂತರ ಪ್ರದೇಶದ ಮಹಿಳೆಯರಿಗೆ ಶಸ್ತ್ರ ಚಿಕಿತ್ಸೆ ನೀಡುವ ಸಲುವಾಗಿ ಪ್ರತಿ ತಾಲ್ಲೂಕಿನಲ್ಲೂ ಇಪ್ಪತ್ತು ಹಾಸಿಗೆಗಳುಳ್ಳ ವಾರ್ಡುಗಳನ್ನು ಕಟ್ಟಲು ಅನುದಾನವನ್ನು ಬಿಡುಗಡೆಮಾಡಲಾಗಿದ್ದು ಈ ಪೈಕಿ 6 ತಾಲ್ಲೂಕಗಳ ವಾರ್ಡುಗಳು ಪೂರ್ಣಗೊಂಡಿರುತ್ತದೆ ಅಲ್ಲದೆ, 6 ಪ್ರಾಥಮಿಕ ಆರೋಗ್ಯ ಕೇಂದ್ರಗಳ ಕಟ್ಟಡಗಳನ್ನು ಕೈಗೆತ್ತಿಕೊಳ್ಳಲಾಗಿದ್ದು ಇವುಗಳಲ್ಲಿ 5 ಪೂರ್ಣಗೊಳ್ಳುವ ಹಂತದಲ್ಲಿರುತ್ತದೆ.

ಜವಾಹರ್ ರೋಜಗಾರ್ ಯೋಜನೆಯಲ್ಲಿ 687.380 ಲಕ್ಷ ರೂ.ಗಳ ಅನುದಾನ ಲಭ್ಯವಿದ್ದು ಇದರಲ್ಲಿ 686.670 ಲಕ್ಷ ರೂ.ಗಳನ್ನು ಮಂಡಲ ಪಂಚಾಯಿತಿಗಳಿಗೆ ಬಿಡುಗಡೆ ಮಾಡಲಾಯಿತು. ಮಂಡಲ ಪಂಚಾಯಿತಿ ಕಡೆಯಿಂದ ಅನುದಾನ ಉಪಯೋಗಿಸಿ ಅತ್ಯಂತ ಅವಶ್ಯಕ ಕಾಮಗಾರಿಗಳ ಕ್ರಿಯಾ ಯೋಜನೆಯನ್ನು ತಯಾರಿಸಿ ಯೋಜನೆಯನ್ನು ಅನುಷ್ಠಾನಗೊಳಿಸಲಾಯಿತು.

ಸಮಗ್ರ ಗ್ರಾಮೀಣಾಭಿವೃದ್ಧಿ ಯೋಜನೆಯಡಿಯಲ್ಲಿ ಒಟ್ಟು 9009 ಫಲಾನುಭವಿಗಳಿಗೆ (ಹಳೆಯ ಫಲಾನುಭವಿಗಳು ಸೇರಿ) ಸವಲತ್ತುಗಳನ್ನು ನೀಡಿ ಒಟ್ಟು 170.084 ಲಕ್ಷ ರೂ.ಗಳನ್ನು ಖರ್ಚು ಮಾಡಲಾಯಿತು.

ಜಿಲ್ಲೆಯು ಅಭಾವಕ್ಕೆ ತುತ್ತಾಗಿದ್ದು ಕೆಲವು ಗ್ರಾಮಗಳಲ್ಲಿ ಕುಡಿಯುವ ನೀರಿಗೆ ತೊಂದರೆಯಿದ್ದು, ಅಂತಹ ಗ್ರಾಮಗಳಿಗೆ ಕೊಳವೆ ಬಾವಿಗಳನ್ನು ಕೊರೆಯಿಸಿಕೊಡಲಾಯಿತು. ಇದಲ್ಲದೆ ಯೋಜನೆಯಲ್ಲಿಯೂ ಸಹಾ 201 ಗ್ರಾಮಗಳಿಗೆ ಕೊಳವೆ ಬಾವಿಗಳನ್ನು ಕೊರೆಯಿಸಿ ಕೊಡಲಾಯಿತು. ಯೋಜನೆಯಲ್ಲಿ ನೀರು ಪೂರೈಕೆ ಕಾರ್ಯಕ್ರಮಕ್ಕೆ 30.65 ಲಕ್ಷ ರೂ.ಗಳನ್ನು ಖರ್ಚು ಮಾಡಲಾಯಿತು.

ಮಂಡಲ ಪಂಚಾಯಿತಿಗಳ ಆರ್ಥಿಕ ಮಟ್ಟವನ್ನು ಉತ್ತಮ ಪಡಿಸಲು 192 ಕೆರೆಗಳಿಗೆ 48.24 ಲಕ್ಷ ಬಿತ್ತನೆ ಮೀನುಮರಿಗಳನ್ನು ಬಿಟ್ಟು 3.00 ಲಕ್ಷ ರೂ. ಹಣವನ್ನು ಖರ್ಚು ಮಾಡುವುದರ ಮೂಲಕ ಮಂಡಲ ಪಂಚಾಯಿತಿಗಳ ಹಣಕಾಸು ಸ್ಥಿತಿ ಉತ್ತಮಗೊಳ್ಳಲು ಕ್ರಮ ಕೈಗೊಳ್ಳಲಾಯಿತೆಂದು ತಿಳಿಸಲಿಚ್ಛಿಸುತ್ತೇನೆ.

ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಲ್ಲಿ 322.99 ಲಕ್ಷ ರೂ.ಗಳ ಅನುದಾನ ಲಭ್ಯವಿದ್ದು ಇವುಗಳ ಕ್ರಿಯಾ ಯೋಜನೆಯನ್ನು ತಯಾರಿಸಿ ಕಾರ್ಯಕ್ರಮಗಳನ್ನು ಕಾರ್ಯಗತಗೊಳಿಸಲಾಯಿತು. ವಿಶೇಷ ಘಟಕ ಯೋಜನೆಯಲ್ಲಿ ಒಟ್ಟು 780 ಮನೆಗಳನ್ನು ನಿರ್ಮಿಸಿ, ಒಟ್ಟು 358.05 ಲಕ್ಷ ರೂ.ಗಳನ್ನು ಖರ್ಚು ಮಾಡಲಾಯಿತು.

ಜಿಲ್ಲೆಯಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳು ಹೆಚ್ಚಿನ ರೀತಿಯಲ್ಲಿ ಪ್ರಗತಿ ಸಾಧಿಸಲು ಶ್ರಮಿಸಿರುವ ಜಿಲ್ಲೆಯ ಹಾಗೂ ತಾಲ್ಲೂಕಿನ ಎಲ್ಲಾ ಅಧಿಕಾರಿಗಳಿಗೆ ಅಭಿನಂದಿಸುತ್ತೇನೆ.

ಈ ವರದಿಯನ್ನು ಉತ್ತಮಗೊಳಿಸಲು ನಿಮ್ಮ ಸಲಹೆಗಳನ್ನು ಸ್ವಾಗತಿಸುತ್ತೇನೆ.

**ಎಂ. ಪಿ. ವೃಷಭೇಂದ್ರಪ್ಪ**
ಅಧ್ಯಕ್ಷರು

# ಜಿಲ್ಲಾ ಪರಿಷತ್ ಮೈಸೂರು

## ಕೃತಜ್ಞತೆ

ಮೈಸೂರು ಜಿಲ್ಲಾ ಪರಿಷತ್ತಿನ ಮೂರನೇ ವಾರ್ಷಿಕ ಆಡಳಿತ ವರದಿಯನ್ನು ತಮ್ಮ ಮುಂದಿಡಲು ನಾನು ಸಂತೋಷಪಡುತ್ತೇನೆ. ಕಳೆದ ಸಾಲುಗಳಿಗಿಂತ ಈ ಸಾಲಿನಲ್ಲಿ ಇನ್ನೂ ಉತ್ತಮವಾದ ಪ್ರಗತಿ ಸಾಧಿಸಲಾಗಿದೆ. ಮುಂಬರುವ ವರ್ಷಗಳಲ್ಲಿ ಎಲ್ಲಾ ಕ್ಷೇತ್ರಗಳಲ್ಲಿ ಇನ್ನೂ ಉತ್ತಮ ರೀತಿಯಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಹಾಗೂ ಆಡಳಿತ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಪ್ರಯತ್ನವನ್ನು ಮುಂದುವರಿಸಲಾಗುವುದು.

ಜಿಲ್ಲಾ ಪರಿಷತ್ ಕಛೇರಿಯನ್ನು ಕಂಪ್ಯೂಟರ್‌ನಿಂದ ಆಧುನೀಕರಣಗೊಳಿಸಿ ಮುಖ್ಯ ಅಭಿವೃದ್ಧಿ ಕಾರ್ಯಕ್ರಮಗಳ ಅಂಕಿ ಅಂಶಗಳನ್ನು ಕ್ರೋಢಿಕರಿಸಿ ಅಭಿವೃದ್ಧಿ ಕಾರ್ಯಗಳನ್ನು ಕಂಪ್ಯೂಟರ್‌ನಿಂದ ನಿರ್ದೇಶಿಸಲಾಗುತ್ತಿದೆ.

ಈ ಆಡಳಿತ ವರದಿಯನ್ನು ತಯಾರಿಸಲು ಸಹಕರಿಸಿದ ಜಿಲ್ಲಾ ಪರಿಷತ್ತಿನ ಅಧೀನ ಕಛೇರಿಯ ಜಿಲ್ಲಾ ಮಟ್ಟದ ಎಲ್ಲಾ ಅಧಿಕಾರಿಗಳಿಗೂ ಹಾಗೂ ಈ ಕಛೇರಿಯ ವಿವಿಧ ಶಾಖೆಯ ಸಿಬ್ಬಂದಿ ವರ್ಗದವರಿಗೂ ನನ್ನ ವೈಯಕ್ತಿಕ ಧನ್ಯವಾದಗಳು. ಈ ವರದಿಯನ್ನು ಇನ್ನೂ ಉತ್ತಮ ಪಡಿಸಲು ಸಲಹೆಗಳಿಗೆ ಸ್ವಾಗತವಿದೆ.

**ಕೌಶಿಕ್ ಮುಖರ್ಜಿ**
ಮುಖ್ಯ ಕಾರ್ಯದರ್ಶಿ
ಜಿಲ್ಲಾ ಪರಿಷತ್, ಮೈಸೂರು.

ಮೈಸೂರು

ದಿನಾಂಕ 8-2-1991

# ಮೈಸೂರು ಜಿಲ್ಲಾ ಪರಿಷತ್ತಿನ 1989–90ನೇ ಸಾಲಿನ ವಾರ್ಷಿಕ ಆಡಳಿತ ವರದಿ

1. ಜಿಲ್ಲಾಪರಿಷತ್ತಿನ ವ್ಯಾಪ್ತಿ (ಕಾಲಂ 138)

| | |
|---|---|
| 1) ವಿಸ್ತೀರ್ಣ | 11,954 ಚ.ಕಿ.ಮಿ. |
| 2) ಜನಸಂಖ್ಯೆ | 25,95,900 (1981ರ ಜನಗಣತಿ ಪ್ರಕಾರ) |
| 3) ಒಟ್ಟು ಸ್ಥಾನಗಳು (ಕಾಲಂ 139) | |
| ಅ) ಚುನಾಯಿತ ಸದಸ್ಯರ ಸಂಖ್ಯೆ | 64 |
| ಆ) ಲೋಕಸಭಾ ಸದಸ್ಯರ ಸಂಖ್ಯೆ | 2 |
| ಇ) ವಿಧಾನಸಭಾ ಸದಸ್ಯರ ಸಂಖ್ಯೆ | 13 |
| ಈ) ವಿಧಾನ ಪರಿಷತ್ತಿನ ಸದಸ್ಯರ ಸಂಖ್ಯೆ | 4 |
| ಉ) ಸದಸ್ಯರ ಪ್ರವಾಸ ಭತ್ಯ<br>ಊ) ಸದಸ್ಯರ ದಿನಭತ್ಯ | 2,09,281–05 ರೂಗಳು. |
| ಋ) ಸಭಾ ಭತ್ಯ | 43,945–80 ರೂಗಳು. |

2. ಕಾಲಂ 165, 166 ಮತ್ತು 177ರ ಪ್ರಕಾರ ವಿವರ :-

| | |
|---|---|
| 1) ಅಧ್ಯಕ್ಷರ ಹೆಸರು | ಶ್ರೀ ಎಂ. ಪಿ. ವೃಷಭೇಂದ್ರಪ್ಪ<br>30-6-88 ರಿಂದ |
| 2) ಉಪಾಧ್ಯಕ್ಷರ ಹೆಸರು | ಶ್ರೀ ವಿ. ಜಿ. ಅಪ್ಪಾಜಿಗೌಡ<br>30-6-88 ರಿಂದ |
| ಅ) ನೀಡಲಾಗಿರುವ ವೇತನ ಮತ್ತು ಭತ್ಯ | 98,222–30 ರೂಗಳು. |
| ಆ) ಪ್ರವಾಸ ಭತ್ಯ ಮತ್ತು ದಿನಭತ್ಯ | 3,10,404–00 ರೂಗಳು. |

3) ಉಪಾಧ್ಯಕ್ಷರಿಗೆ ನೀಡಲಾಗಿರುವ ಅಧಿಕಾರ ಏನಾದರೂ ಇದ್ದರೆ:

ಕರ್ನಾಟಕ ಜಿಲ್ಲಾಪರಿಷತ್ ಕಾಯಿದೆ 1983 ರ ಕಾಲಂ 169 (ಬಿ) ಪ್ರಕಾರ ಜಿಲ್ಲಾಪರಿಷತ್ ಅಧ್ಯಕ್ಷರ ಕೆಲವು ಕರ್ತವ್ಯ ಮತ್ತು ಅಧಿಕಾರಗಳನ್ನು ಈ ಕೆಳಗೆ ತಿಳಿಸಿರುವ ವಿಷಯ ಮತ್ತು ಇಲಾಖೆಗಳಿಗೆ ಸಂಬಂಧಿಸಿದಂತೆ ಉಪಾಧ್ಯಕ್ಷರಿಗೆ ವಹಿಸಲಾಗಿದೆ.

1) ಸಮಾಜ ಕಲ್ಯಾಣ ಇಲಾಖೆಗೆ (ಪರಿಶಿಷ್ಟ ಜಾತಿಗಳ, ಪರಿಶಿಷ್ಟ ಪಂಗಡಗಳ ಕಲ್ಯಾಣ ಇಲಾಖೆ) ಸಂಬಂಧಿಸಿದ ವಿಷಯಗಳು.
2) ಹಿಂದುಳಿದ ವರ್ಗ ಮತ್ತು ಅಲ್ಪ ಸಂಖ್ಯಾತರ ಕಲ್ಯಾಣ ಇಲಾಖೆ.
3) ವಿಶೇಷ ಘಟಕ ಯೋಜನೆ
4) ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ

4) ಅವಿಶ್ವಾಸ ನಿರ್ಣಯ ಏನಾದರೂ ಇದ್ದರೆ.

ಅ) ಅಧ್ಯಕ್ಷರ ವಿರುದ್ಧ —ಇಲ್ಲ—

ಆ) ಉಪಾಧ್ಯಕ್ಷರ ವಿರುದ್ಧ —ಇಲ್ಲ—

5) ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ,
ಚುನಾವಣೆಯಲ್ಲಿ ಸ್ಪರ್ಧೆ ಇತ್ತೆ ?
ಅಥವಾ ತಕರಾರು ಏನಾದರೂ ಇದ್ದಿತೆ. —ಉದ್ಭವಿಸಿಲ್ಲ—

6) ಅಧಿಕಾರಿಗಳ ಹೆಸರು ಮತ್ತು ನೇಮಕ
ದಿನಾಂಕ :

| | |
|---|---|
| ಅ) ಮುಖ್ಯ ಕಾರ್ಯದರ್ಶಿಗಳು | ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ<br>1-4-89 ರಿಂದ 7-12-89<br>ಶ್ರೀ ಜಿ. ವಿ. ಕೊಂಗವಾಡ್<br>7-12-89 ರಿಂದ 31-3-90 |
| ಆ) ಉಪಕಾರ್ಯದರ್ಶಿಗಳು (ಆ) | ಶ್ರೀ ಟಿ. ವೈ. ಸತ್ಯಪ್ಪ<br>1-4-89 ರಿಂದ 20-6-89<br>ಶ್ರೀ ಜಿ. ವಿ. ಕೊಂಗವಾಡ್<br>21-6-89 ರಿಂದ 31-3-90 |
| ಇ) ಉಪಕಾರ್ಯದರ್ಶಿಗಳು (ಅ) | ಶ್ರೀ ಸುಂದರನಾಯಕ್<br>1-4-89 ರಿಂದ 4-4-89<br>ಶ್ರೀ ಟಿ. ವೈ. ಸತ್ಯಪ್ಪ (ಪ್ರಭಾರ)<br>5-4-89 ರಿಂದ 1-6-89<br>ಶ್ರೀ ಕೆ. ರಂಗನಾಥನ್<br>2-6-89 ರಿಂದ 31-3-90 |
| ಈ) ಪರಿಷತ್ ಕಾರ್ಯದರ್ಶಿಗಳು | ಶ್ರೀ ಹೆಚ್. ಎಸ್. ಮುಗ್ದುಂಹುಸೇನ್<br>1-4-89 ರಿಂದ 20-12-89<br>ಶ್ರೀ ಎನ್. ಡಿ. ಮರಿಲಿಂಗಪ್ಪ<br>21-12-89 ರಿಂದ 31-3-90 |
| ಉ) ಮುಖ್ಯ ಯೋಜನಾಧಿಕಾರಿಗಳು | ಶ್ರೀ ಪಿ. ನಾಗಾನಂದವಿಜಯ<br>1-4-89 ರಿಂದ 31-3-90 |
| ಊ) ಮುಖ್ಯ ಲೇಖಾಧಿಕಾರಿಗಳು | ಶ್ರೀ ಎಸ್. ಆರ್. ವಾರಂಬಳ್ಳಿ<br>1-4-89 ರಿಂದ 31-3-90 |

3. ಚುನಾವಣೆ (ಕಾಲಂ 140)

| | |
|---|---|
| 1) ಚುನಾವಣಾ ದಿನಾಂಕ | 1989-90ನೇ ಸಾಲಿನಲ್ಲಿ ಚುನಾವಣೆಗಳು ನಡೆದಿರುವುದಿಲ್ಲ. |
| 2) ಉಪ ಚುನಾವಣೆ ಏನಾದರು ಇದ್ದರೆ ಕಾರಣ ಮತ್ತು ಅದರ ಫಲಿತಾಂಶ | — |
| 3) ಜಿಲ್ಲಾ ಪರಿಷತ್ ಅವಧಿಯನ್ನು ಮುಂದು ವರಿಸುವುದು ಏನಾದರು ಇದ್ದರೆ | ಉದ್ಭವಿಸುವುದಿಲ್ಲ |
| 4) ಚುನಾವಣಾ ವೆಚ್ಚ | — |
| 5) ಚುನಾವಣಾ ತಕರಾರು ಏನಾದರೂ ಇದ್ದಲ್ಲಿ | — |

4. ಜಿಲ್ಲಾ ಪರಿಷತ್‌ನ ಸಭೆಗಳು ಮತ್ತು ಹಾಜರಾತಿ (ಕಾಲಂ 170)

| | |
|---|---|
| ಅ) ಸಾಮಾನ್ಯ ಸಭೆಗಳು ಸಂಖ್ಯೆ | 13 |
| ಆ) ವಿಶೇಷ ಸಭೆಗಳ ಸಂಖ್ಯೆ | 4 |
| ಇ) ಮುಂದೂಡಲಾದ ಸಭೆಗಳ ಸಂಖ್ಯೆ | 3 |
| ಈ) ಸಭೆಗಳನ್ನು ನಡೆಸುವುದರಲ್ಲಿ ಕ್ರಮ ಬದ್ಧತೆ | ಕ್ರಮಬದ್ಧವಾಗಿ ನಡೆಸಲಾಗಿದೆ. |
| ಉ) ಸಭೆಗಳಲ್ಲಿ ಸದಸ್ಯರ ಹಾಜರಾತಿ | ಶೇಕಡಾ 80 |
| ಊ) ಕೋರಂಗಳಿಲ್ಲದೆ ಮುಂದೂಡಲಾದ ಸಭೆಗಳ ಸಂಖ್ಯೆ | 2 |
| ಋ) ಸಭಾ ನಡವಳಿ ನಿಯಮಗಳ ಪಾಲನೆ | ಜಿಲ್ಲಾ ಪರಿಷತ್ ಸಭಾ ನಡವಳಿಯನ್ನು ರಚಿಸಿದ್ದು ಅದರ ಪ್ರಕಾರ ಪಾಲಿಸುತ್ತಿದೆ. |

ೠ) ಠರಾವುಗಳ ಸಂಖ್ಯೆ :

| | |
|---|---|
| 1) ಮಂಡಿಸಿದವು | 116 |
| 2) ಅಂಗೀಕೃತವಾದವು | 114 |
| 3) ಚರ್ಚಿಸಲ್ಪಟ್ಟವು | 116 |
| 4) ವಾಪಸ್ಸು ತೆಗೆದುಕೊಂಡವು | ಯಾವುದು ಇಲ್ಲ |
| 5) ಕೈಬಿಟ್ಟವುಗಳು | — |

5. ಸ್ಥಾಯಿ ಸಮಿತಿಗಳು ಮತ್ತು ಇತರೆ ಸಮಿತಿಗಳು (ಕಾಲಂ 177, 178, 179)

| | |
|---|---|
| 1) ರಚಿಸಿದ ಸ್ಥಾಯಿ ಸಮಿತಿಗಳ ಸಂಖ್ಯೆ | 9 |
| 2) ಸಮಿತಿಗಳ ಚುನಾವಣಾ ದಿನಾಂಕ | 22-8-1988 ರಂದು ಎಲ್ಲಾ ಸ್ಥಾಯಿ ಸಮಿತಿಗಳನ್ನು ಪುನರ್ ರಚಿಸಲಾಗಿದೆ. |
| 3) ಸ್ಥಾಯಿ ಸಮಿತಿಗಳ ಸದಸ್ಯರ ಸಂಖ್ಯೆ | 54 |
| 4) ಪ್ರತಿಯೊಂದು ಸಮಿತಿಯ ಕಾರ್ಯನಿರ್ವಹಣೆ ಬಗ್ಗೆ ಸಾಮಾನ್ಯ ವಿವರಣೆ | ಪ್ರತಿ ಸ್ಥಾಯಿ ಸಮಿತಿಯು ಸಾಮಾನ್ಯವಾಗಿ ತಿಂಗಳಿಗೊಮ್ಮೆ ಸಭೆ ಸೇರಿ ತನ್ನ ವ್ಯಾಪ್ತಿಗೊಳಪಟ್ಟ ಇಲಾಖೆಯ ವಾರ್ಷಿಕ ಯೋಜನೆಯನ್ನು ಪರಿಶೀಲಿಸುವುದು ಮತ್ತು ಕೆಲಸಕಾರ್ಯಗಳ ಪ್ರಗತಿಯ ಪರಿಶೀಲನೆ ನಡೆಸಿ ಸೂಕ್ತ ಸಲಹೆ ಮತ್ತು ತೀರ್ಮಾನ ಕೈಗೊಳ್ಳುವುದು. ಮೇಲಾಗಿ ಸಾಮಾನ್ಯ ಸ್ಥಾಯಿ ಸಮಿತಿ ಹಾಗೂ ಸಾರ್ವಜನಿಕ ಕಾಮಗಾರಿ ಮತ್ತು ಸೌಲಭ್ಯಗಳ ಸ್ಥಾಯಿ ಸಮಿತಿಯು ತನ್ನ ವ್ಯಾಪ್ತಿಗೆ ಬರುವ ಅಪೀಲುಗಳ ವಿಚಾರಣೆಯನ್ನು ನಡೆಸಿ ತೀರ್ಪು ನೀಡುತ್ತದೆ. |
| 5) ಇತರ ಸಮಿತಿಗಳು ಏನಾದರೂ ಇದ್ದಲ್ಲಿ ಮತ್ತು ಅವರುಗಳ ಕಾರ್ಯನಿರ್ವಹಣೆ | ದಿನಾಂಕ 22-8-88 ರಿಂದ ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ ಸಮಿತಿಯನ್ನು ರಚಿಸಲಾಗಿದ್ದು ಈ ಉಪಸಮಿತಿಯಲ್ಲಿ 16 ಜನರ ಮಹಿಳಾ ಸದಸ್ಯರಿದ್ದು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿದೆ. |

6. ಕಾಲಂ 173ರ ಪ್ರಕಾರ ಜಿಲ್ಲಾ ಪರಿಷತ್‌ನ ಕಾರ್ಯನಿರ್ವಹಣೆ:

ಅ) ಜಿಲ್ಲಾ ಪರಿಷತ್‌ನ ಪ್ರತಿಯೊಂದು ಶಾಖೆಯಲ್ಲಿ ಮಂಜೂರಾಗಿರುವ ಸಿಬ್ಬಂದಿ ಸಂಖ್ಯೆ

| | |
|---|---|
| 1) ಜಿಲ್ಲಾ ಪರಿಷತ್ (2515 ಯೋಜನೆ) | 76 |
| 2) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ (2501 ಯೋಜನೆ) | 17 |
| 3) ಆಹಾರ ಶಾಖೆ (2408 ಯೋಜನೆ ಮತ್ತು ಯೋಜನೇತರ) | 8 |

| | |
|---|---|
| 4) ಯೋಜನಾ ಶಾಖೆ (3457 ಯೋಜನೆ–ಯೋಜನೇತರ) | 15 |
| 5) ಆರ್.ಎಲ್.ಇ.ಜಿ.ಪಿ. 2505 ಯೋಜನೆ | 3 |
| 6) ಜೈವಿಕ ಅನಿಲ (2810 ಯೋಜನೆ) | 3 |
| ಆ) ಖಾಲಿ ಇರುವ ಹುದ್ದೆಗಳ ಸಂಖ್ಯೆ ಮತ್ತು ನೇಮಕಾತಿ ಮಾಡದಿರುವ ಬಗ್ಗೆ ಕಾರಣ : | |
| 1) ಜಿಲ್ಲಾ ಪರಿಷತ್ (2515 ಯೋಜನೆ) | 7 } ಶೀಘ್ರಲಿಪಿಗಾರರು ಮತ್ತು ಬೆರಳಚ್ಚುಗಾರರನ್ನು ಪ್ರತಿ ನಿಯೋಜನೆ ಮೇರೆಗೆ ನೇಮಕಾತಿ ಮಾಡಿರುವ ಕಾರಣ |
| 2) ಆರ್ ಎಲ್.ಇ.ಜಿ.ಪಿ. (2505 ಯೋಜನೆ) | 2 |
| ಇ) ಪ್ರತಿಯೊಂದು ವಿಭಾಗದಲ್ಲಿ ತಗಲುತ್ತಿರುವ ಸಿಬ್ಬಂದಿ ವೆಚ್ಚ | |
| 1) ಜಿಲ್ಲಾ ಪರಿಷತ್ (2515 ಯೋಜನೆ) | ರೂ. 21·494 (ಲಕ್ಷಗಳಲ್ಲಿ) |
| 2) ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ 2501 | ರೂ. 5·134 (ಲಕ್ಷಗಳಲ್ಲಿ) |
| 3) ಆಹಾರ ಶಾಖೆ 2408 | ರೂ. 2·351 (ಲಕ್ಷಗಳಲ್ಲಿ) |
| 4) ಯೋಜನಾ ಶಾಖೆ 3451 | ರೂ. 4·288 (ಲಕ್ಷಗಳಲ್ಲಿ) |
| 5) ಜವಹರ್ ರೋಜಗಾರ್ ಯೋಜನೆ 2505 | ರೂ. 0·369 (ಲಕ್ಷಗಳಲ್ಲಿ) |
| 6) ಜೈವಿಕ ಅನಿಲ 2810 | ರೂ. 0·862 (ಲಕ್ಷಗಳಲ್ಲಿ) |
| 7) ಜಿಲ್ಲಾ ಪರಿಷತ್ (2515 ಯೋಜನೇತರ) | ರೂ. 0·940 (ಲಕ್ಷಗಳಲ್ಲಿ) |
| ಈ) ಅಧಿಕಾರಿಗಳು ಮತ್ತು ನೌಕರರಿಗೆ ತರಬೇತಿ | |
| 1) ಶ್ರೀ ಎಂ. ಆರ್. ಶ್ರೀನಿವಾಸಮೂರ್ತಿ ಮುಖ್ಯ ಕಾರ್ಯದರ್ಶಿಗಳು | 21–8–89 ರಿಂದ 27–8–89 ರವರೆಗೆ ನವದೆಹಲಿಯಲ್ಲಿ ತರಬೇತಿ. ಸರ್ಕಾರದ ಆದೇಶ ಡಿ.ಪಿ.ಎ.ಆರ್. 410 ಎಸ್.ಎಂ.ಇ. 88 ದಿನಾಂಕ 7–3–89 |
| 2) ಶ್ರೀ ಕೆ. ಸುಂದರನಾಯಕ್ ಉಪಕಾರ್ಯದರ್ಶಿ (ಅಭಿವೃದ್ಧಿ) | ಕೊಲಂಬೊ ಪ್ಲಾನ್ ಯೋಜನೆಯಡಿಯಲ್ಲಿ 16 ವಾರಗಳ ತರಬೇತಿ–ಹೈದರಬಾದ್, ಕಲ್ಕತ್ತೆ, ಇಂಗ್ಲೆಂಡ್ ಬರ್ಮಿಂಗ್ ಹ್ಯಾಮ್, ಯುನೈಟೆಡ್ ಕಿಂಗಡಮ್. ಸರ್ಕಾರದ ಆದೇಶ ಆರ್.ಡಿ.ಪಿ. 228 ಡಿ.ಪಿ.ಟಿ. 88 ದಿನಾಂಕ 1–4–89 |

| | |
|---|---|
| 3) ಶ್ರೀ ಎಸ್. ಆರ್. ವಾರಂಬಳ್ಳಿ<br>ಮುಖ್ಯ ಲೆಖಾಧಿಕಾರಿಗಳು | ದಿನಾಂಕ 8-1-90 ರಿಂದ 13-1-90ರ ವರೆಗೆ ಹೈದರಬಾದ್‌ನ ನೀರ್ಡ್ ಸಂಸ್ಥೆಯಲ್ಲಿ. ಸರ್ಕಾರದ ಆದೇಶ ಆರ್.ಡಿ ಪಿ. 177 ಡಿ.ಪಿ.ಆರ್ 89 ತಾ|| 30-11-89. |
| 4) ಶ್ರೀ ಗಂಗಾಧರಸ್ವಾಮಿ<br>ಉಪನಿರ್ದೇಶಕರು ಯೋಜನೆ | 29–1–90 ರಿಂದ 9–2–90ರವರೆಗೆ ಆಡಳಿತ ತರಬೇತಿ ಸಂಸ್ಥೆ ಮೈಸೂರು ಡಿ ಡಿ.ಪಿ.ಐ. 11 89–90 ದಿನಾಂಕ 4–1–90. |
| 5) ಶ್ರೀ ವೈ. ಸಿ. ಅರಸಪ್ಪ<br>ಸಹಾಯಕ ಕಾರ್ಯದರ್ಶಿಗಳು (ಅಭಿವೃದ್ಧಿ) | 20–5–89 ರಿಂದ 21–5–89 ಜವಹಾರ್‌ರೋಜ್‌ಗಾರ್ ಯೋಜನೆಯಡಿಯಲ್ಲಿ ಮದ್ರಾಸಿನಲ್ಲಿ ತರಬೇತಿ. ಆರ್.ಡಿ.ಪಿ. 55 ಡಿ.ಟಿ.ಆರ್. 89 ಬೆಂಗಳೂರು ದಿನಾಂಕ 15–5–89. |
| 6) ಶ್ರೀಮತಿ ಎಂ.ಸಿ. ಶೈಲಜ<br>ಯೋಜನಾಧಿಕಾರಿ (ಡ್ವಾಕ್ರಾ) | ಎ.ಟಿ.ಐ. ಮೈಸೂರು ದಿನಾಂಕ 12–6–89 ರಿಂದ 16–6–89 ಎಸ್. ಬಿ. : ಆರ್.ಡಿ. 8/89–90 ದಿನಾಂಕ 16–6–89. |
| ಉ) ಅಧಿಕಾರೇತರರಿಗೆ ತರಬೇತಿ :<br>1) ಶ್ರೀ ಅಪ್ಪಾಜಿಗೌಡ,<br>ಉಪಾಧ್ಯಕ್ಷರು | 3–7–89 ರಿಂದ 8–7–89 ನೀರ್ಡ್ ಹೈದರಾಬಾದ್ ಸರ್ಕಾರದ ಆದೇಶ ಆರ್.ಡಿ.ಪಿ. 61 ಡಿ.ಟಿ.ಆರ್. 89 ದಿನಾಂಕ 21–6–89 |
| ಊ) ಸಮ್ಮೇಳನಗಳನ್ನು ನಡೆಸಿದ್ದು ಮತ್ತು ವಂತಿಕೆ ಹಣ ನೀಡಿದೆಯೆ | —ಇಲ್ಲ— |
| ಋ) ಶಿಕ್ಷೆ ವಿಧಿಸಿದ್ದು | —ಇಲ್ಲ— |
| ೠ) ಅಧಿಕಾರಿಗಳು ಮತ್ತು ನೌಕರರ ಮನವಿ ಪತ್ರಗಳು | —ಇಲ್ಲ— |

7) ಕಾಲಂ 187ರ ಪ್ರಕಾರ ಮಂಡಲ ಪಂಚಾಯಿತ್ತಿಗಳಿಗೆ ಸಂಬಂಧಿಸಿದಂತೆ ಸಮ್ಮೇಳನಗಳು, ವಸ್ತುಪ್ರದರ್ಶನಗಳು ಮತ್ತು ಚರ್ಚಾಗೋಷ್ಠಿಗಳಿಗೆ ವಂತಿಕೆ ನೀಡಿದ್ದು :—

| | |
|---|---|
| ಅ) ಅಖಿಲ ಭಾರತ ಮಟ್ಟದ ಸಂಘ ಸಂಸ್ಥೆಗಳು<br>ಆ) ರಾಜ್ಯ ಮಟ್ಟದ ಸಂಘ ಸಂಸ್ಥೆಗಳು<br>ಇ) ಅಂತರ ರಾಜ್ಯಮಟ್ಟದ ಸಂಘ ಸಂಸ್ಥೆಗಳು<br>ಈ) ಆರ್ಥಿಕ ಸಂಘ ಸಂಸ್ಥೆಗಳು<br>ಉ) ಇತರ ಸಂಘ ಸಂಸ್ಥೆಗಳು | 47,000–00 ರೂಪಾಯಿಗಳು |
| 8) 1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಮತ್ತು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ನಿಗದಿಪಡಿಸಿದ ಹಣ | 1786·75 (ಲಕ್ಷಗಳು) ರೂ. |
| 2) ಖರ್ಚು ಮಾಡಿದ ಹಣ | 1685·00 (ಲಕ್ಷಗಳು) ರೂ. |
| 9) ಜಿಲ್ಲಾ ಪರಿಷತ್ ಎತ್ತಿದ ಸಾಲಗಳು | —ಇಲ್ಲ— |
| 10) ಋಣ ಪರಿಹಾರ ನಿಧಿ (ಸಿಂಕಿಂಗ್ ಫಂಡ್) | —ಇಲ್ಲ— |
| 11) ಬಡ್ಜೆಟ್ ವ್ಯಾಪ್ತಿಯಲ್ಲಿಬಾರದ ಜಿಲ್ಲಾ ಪರಿಷತ್ ನಿಂದ ಖರ್ಚಾಗಿರುವ ಹಣ ಮತ್ತು ಅದಕ್ಕೆ ಕಾರಣಗಳು | —ಇಲ್ಲ— |
| 12) ಬಡ್ಜೆಟ್‌ನ್ನು ಸಕಾಲದಲ್ಲಿ ಮಂಡಿಸಲಾಯಿತೆ ? | ಹೌದು |
| 1) ಜಿಲ್ಲಾ ಪರಿಷತ್ತಿನಲ್ಲಿ ಬಡ್ಜೆಟನ್ನು ಮಂಡಿಸಿದ ದಿನಾಂಕ | 28–2–89 |
| 2) ಜಿಲ್ಲಾ ಪರಿಷತ್ ಬಡ್ಜೆಟ್‌ನ್ನು ಅನುಮೋದಿಸಿದ ದಿನಾಂಕ ಮತ್ತು ಬಡ್ಜೆಟನ್ನು ಸರ್ಕಾರಕ್ಕೆ ಕಳುಹಿಸಿದ ದಿನಾಂಕ | ಜಿಲ್ಲಾ ಪರಿಷತ್ ಅನುಮೋದಿಸಿದ ದಿನಾಂಕ 28–2–89<br>ಸರ್ಕಾರಕ್ಕೆ ಸಲ್ಲಿಸಿದ ದಿನಾಂಕ 2–3–89 |
| 3) ಬಡ್ಜೆಟಿನ ಒಟ್ಟು ಮೊತ್ತ | 83·41 (ಕೋಟಿ ರೂ.ಗಳು) |
| 13) ಲೆಕ್ಕಪತ್ರಗಳು ಸಕಾಲದಲ್ಲಿ ರವಾನಿಸಲಾಯಿತೆ | —ಹೌದು— |
| 14) ಸಂಗ್ರಹಿಸಲಾದ ಹಣವನ್ನು ಮುಸ್ತಾ ಮಾಡಿದ ಬಗ್ಗೆ | |
| ಅ) ಜಿಲ್ಲಾ ಪರಿಷತ್ ವತಿಯಿಂದ | —ಇಲ್ಲ— |
| ಆ) ಸರ್ಕಾರದಿಂದ ಮಂಜೂರಾತಿ ಪಡೆದನಂತರ | —ಇಲ್ಲ— |

| | | | |
|---|---|---|---|
| 15) 1) ಲೆಕ್ಕಪತ್ರಗಳನ್ನು ಪರಿಶೋಧಿಸಿದ ದಿನಾಂಕ 12–6–90 | 88–89ನೇ ಸಾಲಿನ ಲೆಕ್ಕಪತ್ರ ತಪಾಸಣೆಯನ್ನು ದಿನಾಂಕ 12–6–90ರಲ್ಲಿ ಮಾಡಿದ್ದಾರೆ. | | |
| 2) ಲೆಕ್ಕ ಪರಿಶೋಧಕರಿಂದ ನಿರಾಕರಿಸಲ್ಪಟ್ಟ ಐಟಂಗಳ ಸಂಖ್ಯೆ ಅದರ ಬಗ್ಗೆ ಜಿಲ್ಲಾ ಪರಿಷತ್‌ನ ಆದೇಶ | —ಇಲ್ಲ— | | |
| 16) ಲೆಕ್ಕ ಪರಿಶೋಧಕರು ನಿರಾಕರಿಸದ ಹಣವನ್ನು ಸಂಗ್ರಹಿಸಿದ ಒಟ್ಟು ಹಣ ಮತ್ತು ಅದರ ಮೇಲಿನ ಬಡ್ಡಿ ಸಂಗ್ರಹಣೆ | —ಇಲ್ಲ— | | |
| | ಬಂದಿರುವುದು | ವಿಲೇವಾರಿ | ಬಾಕಿ |
| 17) ಕಾಲಂ 269ರ ಪ್ರಕಾರ ಜಿಲ್ಲಾ ಪರಿಷತ್ ಮಂಡಲ ಪಂಚಾಯಿತಿಗಳಿಂದ ಕೇಳಿರುವ ಮಾಹಿತಿ | 3 | ಇಲ್ಲ | 3 |
| 18) ಕಾಲಂ 270ರ ಪ್ರಕಾರ ಮಂಡಲ ಪಂಚಾಯಿತಿಯ ಆದೇಶಗಳನ್ನು ಜಿಲ್ಲಾ ಪರಿಷತ್ತಿನವರು ಅಮಾನತ್ತುಗೊಳಿಸಿರುವ ಪ್ರಕರಣಗಳು (ಮಂಡಲ ಪಂಚಾಯಿತಿವಾರು) | 1 | 1 | ಇಲ್ಲ |
| 19) ಕಾಲಂ 271ರ ಪ್ರಕಾರ ಜಿಲ್ಲಾ ಪರಿಷತ್‌ನವರು ವಿಸರ್ಜಿಸಿದ ಮಂಡಲ ಪಂಚಾಯಿತಿಗಳ ಸಂಖ್ಯೆ | — | — | — |
| 20) ಮಂಡಲ ಪಂಚಾಯಿತಿಗಳ ಆದೇಶಗಳಿಗೆ ವಿರುದ್ಧವಾಗಿ ಜಿಲ್ಲಾ ಪರಿಷತ್ತಿನಲ್ಲಿ ಸಲ್ಲಿಸಲಾದ ಮನವಿಗಳ ಸಂಖ್ಯೆ ಮತ್ತು ಅದರ ತೀರ್ಮಾನ | 14 | 2 | 12 |
| 21) ಜಿಲ್ಲಾ ಪರಿಷತ್ತಿನವರು ಅಂಗೀಕರಿಸದ ಪುನರ್ ಪರಿಶೀಲನೆ ಆದೇಶಗಳ ಸಂಖ್ಯೆ ಸೆಕ್ಷನ್ 274ರ ಪ್ರಕಾರ | 14 | 3 | 11 |

ಜಿಲ್ಲಾ ಪರಿಷತ್ ಕಾಯಿದೆಯ ಸೆಕ್ಷನ್ 270, 273, 274ರ ಪ್ರಕಾರ ಮನವಿಗಳಲ್ಲದೆ ಸೆಕ್ಷನ್ 64(5)ರ ಪ್ರಕಾರ ಕಾಮಗಾರಿ ಮತ್ತು ಸೌಲಭ್ಯಗಳ ಸ್ಥಾಯಿ ಸಮಿತಿಯ ಮುಂದೆ 23 ಮನವಿಗಳನ್ನು ಸ್ವೀಕರಿಸಿದ್ದು ಈ ಪೈಕಿ 20 ಮನವಿಗಳನ್ನು ವಿಲೇವಾರಿ ಮಾಡಲಾಗಿದ್ದು 3 ಪ್ರಕರಣಗಳು ಬಾಕಿ ಇರುತ್ತೆ. ಸೆಕ್ಷನ್ 113ರ ಪ್ರಕಾರ 1 ಅರ್ಜಿಯನ್ನು ಸ್ವೀಕರಿಸಿದ್ದು ಅದು ಬಾಕಿ ಇರುತ್ತದೆ. ಇದಲ್ಲದೆ,

| | |
|---|---|
| | ಕರ್ನಾಟಕ ಸ್ಥಳೀಯ ಪ್ರಾಧಿಕಾರ ಪಕ್ಷಾಂತರ ನಿಷೇದ (ಅಧಿನಿಯಮ ಇದರಡಿಯಲ್ಲಿ ಎರಡು ಪ್ರಕರಣಗಳು ದಾಖಲಾಗಿದ್ದು ಎರಡು ಪ್ರಕರಣಗಳು ವಿಲೇವಾರಿ ಆಗಿರುತ್ತದೆ. |
| 22) ಜಿಲ್ಲಾಪರಿಷತ್ತಿನವರು ಸ್ಥಾಯಿ ಸಮಿತಿಗಳ ಯಾವುದೇ ತೀರ್ಮಾನಗಳನ್ನು ಪುನರ್ ಪರಿಶೀಲಿಸಿದ ಪ್ರಕರಣಗಳ ಸಂಖ್ಯೆ | —ಇಲ್ಲ— |
| 23) ಜಿಲ್ಲಾಪರಿಷತ್‌ನವರು ಬದಲಾಯಿಸಿದ ಸಮಿತಿಗಳ ತೀರ್ಮಾನಗಳ ಸಂಖ್ಯೆ | —ಇಲ್ಲ— |
| 24) ರಚಿಸಿದ ನಿಯಮಗಳ ಸಂಖ್ಯೆ ಇದಕ್ಕೆ ಸರ್ಕಾರದ ಪೂರ್ವ ಮಂಜೂರಾತಿ ತೆಗೆದುಕೊಳ್ಳಲಾಗಿತ್ತೆ ? | —ಇಲ್ಲ— |
| 25) ಮಂಡಲ ಪಂಚಾಯಿತಿಯವರು ನಿಯಾಮವಳಿಗಳನ್ನು ರಚಿಸಿಕೊಳ್ಳಲು ಜಿಲ್ಲಾಪರಿಷತ್‌ನವರು ಪೂರ್ವ ಅನುಮತಿ ಇತ್ತ ಪ್ರಕರಣಗಳ ಸಂಖ್ಯೆ | —ಇಲ್ಲ— |
| 26) ಕಾಲಂ 296 ಮತ್ತು 193ರ ಪ್ರಕಾರ ಜಿಲ್ಲಾಪರಿಷತ್ ನಿಧಿಗೆ ಜಮಾ ಮಾಡಲ್ಪಟ್ಟ ಒಟ್ಟು ದಂಡ, ಬಾಡಿಗೆ ಮತ್ತು ಫೀ ವಸೂಲಾತಿ | 1·539 (ಲಕ್ಷಗಳು) |
| 27) ಕಾಲಂ 302ರ ಪ್ರಕಾರ ಖರ್ಚು ಬಾಬ್ತು ವಸೂಲಿ ಮಾಡಿದ ಒಟ್ಟು ಹಣ | —ಇಲ್ಲ— |

## 1989–90ನೇ ಸಾಲಿನ ಮೈಸೂರು ಜಿಲ್ಲಾ ಪರಿಷತ್ ಸದಸ್ಯರುಗಳ ಪಟ್ಟಿ

1. ಶ್ರೀ ಜಿ. ಟಿ. ದೇವೇಗೌಡ
ಜಿಲ್ಲಾ ಪರಿಷತ್ ಸದಸ್ಯರು
ಮೈಸೂರು ತಾಲ್ಲೂಕು

2. ಶ್ರೀ ಪುಟ್ಟಮಾದಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಮೈಸೂರು ತಾಲ್ಲೂಕು

3. ಶ್ರೀ ಕೆ. ಎನ್. ಪುಟ್ಟಬುದ್ಧಿ
ಜಿಲ್ಲಾ ಪರಿಷತ್ ಸದಸ್ಯರು
ಮೈಸೂರು ತಾಲ್ಲೂಕು

4. ಶ್ರೀಮತಿ ಲಕ್ಷ್ಮಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಮೈಸೂರು ತಾಲ್ಲೂಕು

5. ಶ್ರೀ ಎಸ್. ಸಿದ್ದೇಗೌಡ
ಜಿಲ್ಲಾ ಪರಿಷತ್ ಸದಸ್ಯರು
ಮೈಸೂರು ತಾಲ್ಲೂಕು

6. ಶ್ರೀಮತಿ ಸುನೀತಾ
ಜಿಲ್ಲಾ ಪರಿಷತ್ ಸದಸ್ಯೆ
ಟಿ. ನರಸೀಪುರ ತಾಲ್ಲೂಕು

7. ಶ್ರೀ ಎಸ್. ಸಿದ್ದಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

8. ಶ್ರೀ ಆರ್. ರಾಘವೇಂದ್ರ ಭರಣಿ
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

9. ಶ್ರೀ ಬಾಲಚಂದ್ರ
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

10. ಶ್ರೀ ಎಸ್. ಆರ್. ವರದರಾಜು
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

11. ಶ್ರೀ ಮಹದೇವ
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

12. ಶ್ರೀ ಕೆ. ಸಿ. ಬಲರಾಂ
ಜಿಲ್ಲಾ ಪರಿಷತ್ ಸದಸ್ಯರು
ಟಿ. ನರಸೀಪುರ ತಾಲ್ಲೂಕು

13. ಶ್ರೀ ಎನ್. ನಾಗರಾಜಮೂರ್ತಿ
ಜಿಲ್ಲಾ ಪರಿಷತ್ ಸದಸ್ಯರು
ಕೊಳ್ಳೇಗಾಲ ತಾಲ್ಲೂಕು

14. ಶ್ರೀ ಎನ್. ದೊರೈರಾಜ್
ಜಿಲ್ಲಾ ಪರಿಷತ್ ಸದಸ್ಯರು
ಕೊಳ್ಳೇಗಾಲ ತಾಲ್ಲೂಕು

15. ಶ್ರೀಮತಿ ಫಿಲೋಮಿನಾ
ಜಿಲ್ಲಾ ಪರಿಷತ್ ಸದಸ್ಯೆ
ಕೊಳ್ಳೇಗಾಲ ತಾಲ್ಲೂಕು

16. ಶ್ರೀ ಕೆ. ಎಂ. ಶಿವರಾಜಪ್ಪ
ಜಿಲ್ಲಾ ಪರಿಷತ್ ಸದಸ್ಯರು
ಕೊಳ್ಳೇಗಾಲ ತಾಲ್ಲೂಕು

17. ಶ್ರೀಮತಿ ಮಾದಿಯಮ್ಮಾಳ್
ಜಿಲ್ಲಾ ಪರಿಷತ್ ಸದಸ್ಯೆ
ಕೊಳ್ಳೇಗಾಲ ತಾಲ್ಲೂಕು

18. ಶ್ರೀ ಆರ್. ಎಂ. ಮಲ್ಲಿಕಾರ್ಜುನಶೆಟ್ಟಿ
ಜಿಲ್ಲಾ ಪರಿಷತ್ ಸದಸ್ಯರು
ಕೊಳ್ಳೇಗಾಲ ತಾಲ್ಲೂಕು

19. ಶ್ರೀ ವಿ. ರುದ್ರಪ್ಪ
ಜಿಲ್ಲಾ ಪರಿಷತ್ ಸದಸ್ಯರು
ಕೊಳ್ಳೇಗಾಲ ತಾಲ್ಲೂಕು

20. ಶ್ರೀ ರಾಮಯ್ಯ
ಜಿಲ್ಲಾ ಪರಿಷತ್ ಸದಸ್ಯರು
ನಂಜನಗೂಡು ತಾಲ್ಲೂಕು

21. ಡಾ|| ಎಂ. ಶೈಲಾ
ಜಿಲ್ಲಾ ಪರಿಷತ್ ಸದಸ್ಯೆ
ನಂಜನಗೂಡು ತಾಲ್ಲೂಕು

22. ಶ್ರೀ ಹೆಚ್. ಪಿ. ತಮ್ಮಣ್ಣೇಗೌಡ
ಜಿಲ್ಲಾ ಪರಿಷತ್ ಸದಸ್ಯರು
ನಂಜನಗೂಡು ತಾಲ್ಲೂಕು

23. ಶ್ರೀ ಎಸ್. ಸಿ. ಬಸವರಾಜು
ಜಿಲ್ಲಾ ಪರಿಷತ್ ಸದಸ್ಯರು
ನಂಜನಗೂಡು ತಾಲ್ಲೂಕು

24. ಶ್ರೀಮತಿ ಸಿದ್ದಲಿಂಗಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ನಂಜನಗೂಡು ತಾಲ್ಲೂಕು

25. ಶ್ರೀ ಡಿ. ಸಿದ್ದಪ್ಪ
ಜಿಲ್ಲಾ ಪರಿಷತ್ ಸದಸ್ಯರು
ನಂಜನಗೂಡು ತಾಲ್ಲೂಕು

26. ಶ್ರೀಮತಿ ಶಶಿಕಲಾ ಎಸ್. ನಾಗರಾಜ್
ಜಿಲ್ಲಾ ಪರಿಷತ್ ಸದಸ್ಯೆ
ನಂಜನಗೂಡು ತಾಲ್ಲೂಕು

27. ಶ್ರೀ ಬಿ. ಎಂ. ರಾಮು
ಜಿಲ್ಲಾ ಪರಿಷತ್ ಸದಸ್ಯರು
ನಂಜನಗೂಡು ತಾಲ್ಲೂಕು

28. ಶ್ರೀ ಆರ್. ನಾಗರಾಜು
ಜಿಲ್ಲಾ ಪರಿಷತ್ ಸದಸ್ಯರು
ಯಳಂದೂರು ತಾಲ್ಲೂಕು

29. ಶ್ರೀ ಎಂ. ಮನಿಯಾ
ಜಿಲ್ಲಾ ಪರಿಷತ್ ಸದಸ್ಯರು
ಯಳಂದೂರು ತಾಲ್ಲೂಕು

30. ಶ್ರೀಮತಿ ಟಿ. ಎಸ್. ರಾಜಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಚಾಮರಾಜನಗರ ತಾಲ್ಲೂಕು

31. ಶ್ರೀ ಹೆಚ್. ಆರ್. ವೆಂಕಟರಂಗನಾಯ್ಕ
ಜಿಲ್ಲಾ ಪರಿಷತ್ ಸದಸ್ಯರು
ಚಾಮರಾಜನಗರ ತಾಲ್ಲೂಕು

32. ಶ್ರೀ ಎ. ಎಸ್. ನಟರಾಜು
ಜಿಲ್ಲಾ ಪರಿಷತ್ ಸದಸ್ಯರು
ಚಾಮರಾಜನಗರ ತಾಲ್ಲೂಕು

33. ಶ್ರೀ ಕೆ. ಸಿ. ರಂಗಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಚಾಮರಾಜನಗರ ತಾಲ್ಲೂಕು

34. ಶ್ರೀ ಸಿ. ಗುರುಸ್ವಾಮಿ
ಜಿಲ್ಲಾ ಪರಿಷತ್ ಸದಸ್ಯರು
ಚಾಮರಾಜ ನಗರ ತಾಲ್ಲೂಕು

35. ಶ್ರೀಮತಿ ಎಂ. ಜಯಶೀಲಾ
ಜಿಲ್ಲಾ ಪರಿಷತ್ ಸದಸ್ಯೆ
ಚಾಮರಾಜನಗರ ತಾಲ್ಲೂಕು

36. ಶ್ರೀಮತಿ ಗಂಗಾಂಬಿಕೆ
ಜಿಲ್ಲಾ ಪರಿಷತ್ ಸದಸ್ಯೆ
ಚಾಮರಾಜನಗರ ತಾಲ್ಲೂಕು

37. ಶ್ರೀ ಹನುಮಂತಶೆಟ್ಟಿ
ಜಿಲ್ಲಾ ಪರಿಷತ್ ಸದಸ್ಯರು
ಚಾಮರಾಜನಗರ ತಾಲ್ಲೂಕು

38. ಶ್ರೀಮತಿ ಕೆ.ಸಿ. ಮಹದೇವಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಗುಂಡ್ಲುಪೇಟೆ ತಾಲ್ಲೂಕು

39. ಶ್ರೀ ಜಿ. ಬಿ. ನಂಜಪ್ಪ
ಜಿಲ್ಲಾ ಪರಿಷತ್ ಸದಸ್ಯರು
ಗುಂಡ್ಲುಪೇಟೆ ತಾಲ್ಲೂಕು

40. ಶ್ರೀ ಬಿ.ಎಂ. ಮುನಿರಾಜು
ಜಿಲ್ಲಾ ಪರಿಷತ್ ಸದಸ್ಯರು
ಗುಂಡ್ಲುಪೇಟೆ ತಾಲ್ಲೂಕು

41. ಶ್ರೀ ಎಂ. ಪಿ. ವೃಷಭೇಂದ್ರಪ್ಪ
ಜಿಲ್ಲಾ ಪರಿಷತ್ ಸದಸ್ಯರು
ಗುಂಡ್ಲುಪೇಟೆ ತಾಲ್ಲೂಕು

42. ಶ್ರೀ ಟಿ. ಎಂ. ಸಿದ್ದಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಗುಂಡ್ಲುಪೇಟೆ ತಾಲ್ಲೂಕು
(ದಿನಾಂಕ : 2–10–89ರಂದು ನಿಧನರಾದರು)

43. ಶ್ರೀ ಸಿ. ಟಿ. ಪುಟ್ಟಸ್ವಾಮಿಗೌಡ
ಜಿಲ್ಲಾ ಪರಿಷತ್ ಸದಸ್ಯರು
ಹುಣಸೂರು ತಾಲ್ಲೂಕು

44. ಶ್ರೀಮತಿ ಕೃಷ್ಣಾಬಾಯಿ
ಜಿಲ್ಲಾ ಪರಿಷತ್ ಸದಸ್ಯೆ
ಹುಣಸೂರು ತಾಲ್ಲೂಕು

45. ಶ್ರೀ ಎಸ್. ಚಿಕ್ಕಮಾದು
ಜಿಲ್ಲಾ ಪರಿಷತ್ ಸದಸ್ಯರು
ಹುಣಸೂರು ತಾಲ್ಲೂಕು

46. ಶ್ರೀ ಎ. ಟಿ. ತೋಂಟದಾರ್ಯ
ಜಿಲ್ಲಾ ಪರಿಷತ್ ಸದಸ್ಯರು
ಹುಣಸೂರು ತಾಲ್ಲೂಕು

47. ಶ್ರೀ ನಾಗರಾಜ್ ಮಲ್ಲಾಡಿ
ಜಿಲ್ಲಾ ಪರಿಷತ್ ಸದಸ್ಯರು
ಹುಣಸೂರು ತಾಲ್ಲೂಕು

48. ಶ್ರೀಮತಿ ಎಸ್. ಶಾರದಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಹೆಚ್. ಡಿ. ಕೋಟೆ ತಾಲ್ಲೂಕು

49. ಶ್ರೀ ಹೆಚ್. ಸಿ. ಶಿವಣ್ಣ
ಜಿಲ್ಲಾ ಪರಿಷತ್ ಸದಸ್ಯರು
ಹೆಚ್. ಡಿ. ಕೋಟೆ ತಾಲ್ಲೂಕು

50. ಶ್ರೀ ಜಿ. ಬಿ. ಸುಬ್ಬಣ್ಣ
ಜಿಲ್ಲಾ ಪರಿಷತ್ ಸದಸ್ಯರು
ಹೆಚ್. ಡಿ. ಕೋಟೆ ತಾಲ್ಲೂಕು

51. ಶ್ರೀ ಚಿಕ್ಕಣ್ಣ
ಜಿಲ್ಲಾ ಪರಿಷತ್ ಸದಸ್ಯರು
ಹೆಚ್. ಡಿ. ಕೋಟೆ ತಾಲ್ಲೂಕು

52. ಶ್ರೀ ಎಂ. ಪಿ. ನಾಗರಾಜ್
ಜಿಲ್ಲಾ ಪರಿಷತ್ ಸದಸ್ಯರು
ಹೆಚ್. ಡಿ. ಕೋಟೆ ತಾಲ್ಲೂಕು

53. ಶ್ರೀ ಕೆ. ಎಂ. ದೊಡ್ಡಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಹೆಚ್. ಡಿ. ಕೋಟೆ ತಾಲ್ಲೂಕು

54. ಶ್ರೀ ಎಸ್. ಬಿ. ಬೋರಣ್ಣ
ಜಿಲ್ಲಾ ಪರಿಷತ್ ಸದಸ್ಯರು
ಕೆ. ಆರ್. ನಗರ ತಾಲ್ಲೂಕು

55. ಶ್ರೀ ಎಂ. ಎಸ್. ಕೃಷ್ಣೇಗೌಡ
ಜಿಲ್ಲಾ ಪರಿಷತ್ ಸದಸ್ಯರು
ಕೆ. ಆರ್. ನಗರ ತಾಲ್ಲೂಕು

56. ಶ್ರೀಮತಿ ಪಾರ್ವತಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಕೆ. ಆರ್. ನಗರ ತಾಲ್ಲೂಕು

57. ಶ್ರೀಮತಿ ರಾಜಮ್ಮ
ಜಿಲ್ಲಾ ಪರಿಷತ್ ಸದಸ್ಯೆ
ಕೆ. ಆರ್. ನಗರ ತಾಲ್ಲೂಕು

58. ಶ್ರೀ ಹೆಚ್. ಸುಬ್ಬಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಕೆ. ಆರ್. ನಗರ ತಾಲ್ಲೂಕು

59. ಶ್ರೀ ಡಿ. ಎಸ್. ಜಗದೀಶ್
ಜಿಲ್ಲಾ ಪರಿಷತ್ ಸದಸ್ಯರು
ಕೆ. ಆರ್. ನಗರ ತಾಲ್ಲೂಕು

60. ಶ್ರೀಮತಿ ಕೆ. ಟಿ. ಪದ್ಮಲತಾ
ಜಿಲ್ಲಾ ಪರಿಷತ್ ಸದಸ್ಯೆ
ಪಿರಿಯಾಪಟ್ಟಣ ತಾಲ್ಲೂಕು

61. ಶ್ರೀ ಹೆಚ್. ಸಿ. ಬಸವರಾಜು
ಜಿಲ್ಲಾ ಪರಿಷತ್ ಸದಸ್ಯರು
ಪಿರಿಯಾಪಟ್ಟಣ ತಾಲ್ಲೂಕು

62. ಶ್ರೀ ಕೆ. ಬಿ. ಚನ್ನಯ್ಯ
ಜಿಲ್ಲಾ ಪರಿಷತ್ ಸದಸ್ಯರು
ಪಿರಿಯಾಪಟ್ಟಣ ತಾಲ್ಲೂಕು

63. ಶ್ರೀ ವಿ. ಜಿ. ಅಪ್ಪಾಜಿಗೌಡ
ಜಿಲ್ಲಾ ಪರಿಷತ್ ಸದಸ್ಯರು.
ಪಿರಿಯಾಪಟ್ಟಣ ತಾಲ್ಲೂಕು

64. ಶ್ರೀ ಆರ್. ಎಸ್. ಚಿಕ್ಕವೀರಪ್ಪ
ಜಿಲ್ಲಾ ಪರಿಷತ್ ಸದಸ್ಯರು
ಪಿರಿಯಾಪಟ್ಟಣ ತಾಲ್ಲೂಕು

65. ಶ್ರೀ ವಿ. ಶ್ರೀನಿವಾಸ್ ಪ್ರಸಾದ್
ಲೋಕಸಭಾ ಸದಸ್ಯರು
ಮೈಸೂರು

66. ಶ್ರೀ ಶ್ರೀಕಂಠದತ್ತನರಸಿಂಹರಾಜ ಒಡೆಯರ್
ಲೋಕಸಭಾ ಸದಸ್ಯರು
ಮೈಸೂರು

67. ಶ್ರೀ ಎಂ. ಸತ್ಯನಾರಾಯಣರಾವ್
ವಿಧಾನ ಪರಿಷತ್ ಸದಸ್ಯರು
ಮೈಸೂರು

68. ಶ್ರೀ ಟಿ. ಕೆ. ಚಿನ್ನಸ್ವಾಮಿ
ವಿಧಾನ ಪರಿಷತ್ ಸದಸ್ಯರು
ಕೃಷ್ಣರಾಜನಗರ

69. ಶ್ರೀ ವಿ. ಹೆಚ್. ಗೌಡ
ವಿಧಾನ ಪರಿಷತ್ ಸದಸ್ಯರು
ಮೈಸೂರು

70. ಶ್ರೀ ಟಿ. ಎನ್. ನರಸಿಂಹಮೂರ್ತಿ
ವಿಧಾನ ಪರಿಷತ್ ಸದಸ್ಯರು
ಮೈಸೂರು

71. ಶ್ರೀ ಜಿ. ರಾಜುಗೌಡ
ಶಾಸಕರು,
ಕೊಳ್ಳೆಗಾಲ ತಾಲ್ಲೂಕು

72. ಶ್ರೀ ಎಂ. ಸಿದ್ದಮಾದಯ್ಯ
ಶಾಸಕರು
ಯಳಂದೂರು

73. ಶ್ರೀ ಕೆ. ಎಂ. ಚಿಕ್ಕಮಾದನಾಯ್ಕ
ಶಾಸಕರು
ಟಿ. ನರಸೀಪುರ

74. ಶ್ರೀ ಎಂ. ಶ್ರೀನಿವಾಸಯ್ಯ
ಶಾಸಕರು
ಟಿ. ನರಸೀಪುರ

75. ಶ್ರೀ ಎಂ. ಮಹಾದೇವು
ಶಾಸಕರು
ನಂಜನಗೂಡು

76. ಶ್ರೀ ಎಂ. ರಾಜಶೇಖರಮೂರ್ತಿ
ಶಾಸಕರು
ಮೈಸೂರು

77. ಶ್ರೀ ಕೆ. ಸಿದ್ದಯ್ಯ
ಶಾಸಕರು
ಚಾಮರಾಜನಗರ

78. ಶ್ರೀ ವಾಟಾಳ್ ನಾಗರಾಜ್
ಶಾಸಕರು
ಚಾಮರಾಜನಗರ

79. ಶ್ರೀಮತಿ ಕೆ. ಎಸ್ ನಾಗರತ್ನಮ್ಮ
ಶಾಸಕಿಯವರು
ಗುಂಡ್ಲುಪೇಟೆ

80. ಶ್ರೀ ಎಂ. ಪಿ. ವೆಂಕಟೇಶ್
ಶಾಸಕರು
ಹೆಚ್. ಡಿ. ಕೋಟೆ

81. ಶ್ರೀಮತಿ ಚಂದ್ರಪ್ರಭಾ ಅರಸ್
ಶಾಸಕಿಯವರು
ಹುಣಸೂರು

82. ಶ್ರೀ ಹೆಚ್. ವಿಶ್ವನಾಥ್
ಶಾಸಕರು
ಕೃಷ್ಣರಾಜನಗರ

83. ಶ್ರೀ ಕೆ. ಎಸ್. ಕಾಳಮರೀಗೌಡ
ಶಾಸಕರು
ಪಿರಿಯಾಪಟ್ಟಣ

84. ಅಧ್ಯಕ್ಷರು
ಎಂ.ಡಿ.ಸಿ.ಸಿ. ಬ್ಯಾಂಕ್
ಮೈಸೂರು

# 1989–90ನೇ ಮೈಸೂರು ಜಿಲ್ಲಾ ಪರಿಷತ್‌ನ

## ಸ್ಥಾಯೀ ಸಮಿತಿ ಸದಸ್ಯರುಗಳ ಪಟ್ಟಿ

ಶ್ರೀಯುತರಾದ ;

General

**1 ಸಾಮಾನ್ಯ ಸ್ಥಾಯೀ ಸಮಿತಿ**

ಸಾಮಾನ್ಯ

1. ವಿ. ಜಿ. ಅಪ್ಪಾಜಿಗೌಡ ಉಪಾಧ್ಯಕ್ಷರು ಅಧ್ಯಕ್ಷರು
2. ಶ್ರೀಮತಿ ಗಂಗಾಂಬಿಕೆ ಸದಸ್ಯೆ
3. ಡಿ. ಸಿದ್ದಪ್ಪ ಸದಸ್ಯರು
4. ಬಾಲಚಂದ್ರ ,,
5. ಎಸ್. ಚಿಕ್ಕಮಾಧು ,,
6. ಎನ್. ದೊರೈರಾಜು ,,

**2. ಹಣಕಾಸು ಮತ್ತು ಆಡಿಟ್ ಸ್ಥಾಯೀಸಮಿತಿ**

ಹಣಕಾಸು + audit

1. ಸಿ. ಗುರುಸ್ವಾಮಿ ಅಧ್ಯಕ್ಷರು
2. ಶ್ರೀಮತಿ ಶಶಿಕಲಾ ನಾಗರಾಜ್ ಸದಸ್ಯೆ
3. ಮಹದೇವ ಸದಸ್ಯರು
4. ಜಿ. ಟಿ. ದೇವೇಗೌಡ ,,
5. ಎಂ. ಎಸ್. ಕೃಷ್ಣೇಗೌಡ ,,
6. ಹೆಚ್. ಆರ್. ವೆಂಕಟರಂಗನಾಯ್ಕ ,,

ಯೋಜನೆ ಅಭಿವೃದ್ಧಿ

**3. ಯೋಜನೆ ಮತ್ತು ಅಭಿವೃದ್ಧಿ ಸ್ಥಾಯೀ ಸಮಿತಿ**

Plan

1. ಚಿಕ್ಕಣ್ಣ ಅಧ್ಯಕ್ಷರು
2. ಶ್ರೀಮತಿ ಕೆ. ಟಿ. ಪದ್ಮಲತಾ ಸದಸ್ಯೆ
3. ಬಿ. ಎಂ. ಮುನಿರಾಜು ಸದಸ್ಯರು
4. ಡಿ. ಎಸ್. ಜಗದೀಶ್ ,,
5. ಎಸ್. ಸಿದ್ದಯ್ಯ ,,
6. ಕೆ. ಎಂ. ದೊಡ್ಡಯ್ಯ ,,

Public works ಕಾಮಗಾರಿ Benefit

**4. ಸಾರ್ವಜನಿಕ ಕಾಮಗಾರಿ ಮತ್ತು ಸೌಲಭ್ಯಗಳ ಸ್ಥಾಯೀ ಸಮಿತಿ**

1. ಎಸ್. ಸಿ. ಬಸವರಾಜು ಅಧ್ಯಕ್ಷರು
2. ಜಿ. ಟಿ. ದೇವೇಗೌಡ ಸದಸ್ಯರು
3. ಆರ್. ಎಸ್. ಚಿಕ್ಕವೀರಪ್ಪ ,,
4. ಬಿ. ಎಂ. ರಾಮು ,,
5. ಸಿ. ಟಿ. ಪುಟ್ಟಸ್ವಾಮಿಗೌಡ ,,
6. ಎನ್. ನಾಗರಾಜಮೂರ್ತಿ ,,

ಶ್ರೀಯುತರಾದ :

सामाजिक न्याय

5. ಸಾಮಾಜಿಕ ನ್ಯಾಯ ಸ್ಥಾಯೀ ಸಮಿತಿ

Social justice

1. ಎಸ್. ಆರ್. ವರದರಾಜು — ಅಧ್ಯಕ್ಷರು
2. ಶ್ರೀಮತಿ ಕೆ. ಸಿ. ಮಹದೇವಮ್ಮ — ಸದಸ್ಯೆ
3. ಡಿ. ಎಸ್. ಜಗದೀಶ್ — ಸದಸ್ಯರು
4. ಕೆ. ಸಿ. ಬಲರಾಂ — ,,
5. ನಾಗರಾಜ್‌ಮಲ್ಲಾಡಿ — ,,
6. ರಾಮಯ್ಯ — ,,

6. ಶಿಕ್ಷಣ ಸ್ಥಾಯಿ ಸಮಿತಿ

Educ.

1. ಎಸ್. ಬಿ. ಬೋರಣ್ಣ — ಅಧ್ಯಕ್ಷರು
2. ಶ್ರೀಮತಿ ಕೃಷ್ಣಾ ಬಾಯಿ — ಸದಸ್ಯೆ
3. ಶ್ರೀಮತಿ ಶಾರದಮ್ಮ — ,,
4. ಶ್ರೀಮತಿ ಸುನೀತಾ — ,,
5. ಕೆ. ಸಿ. ಬಲರಾಂ — ಸದಸ್ಯರು
6. ಎಂ. ಮುನಿಯಾ — ,,

व्यवसाय agri + animal husbandry

7. ವ್ಯವಸಾಯ ಮತ್ತು ಪಶುಸಂಗೋಪನಾ ಸ್ಥಾಯಿಸಮಿತಿ

1. ಹನುಮಂತಶೆಟ್ಟಿ — ಅಧ್ಯಕ್ಷರು
2. ವಿ. ರುದ್ರಪ್ಪ — ಸದಸ್ಯರು
3. ಬಿ. ಎಂ. ಮುನಿರಾಜು — ,,
4. ಎಂ. ಪಿ. ನಾಗರಾಜು — ,,
5. ಶ್ರೀಮತಿ ಪಾರ್ವತಮ್ಮ — ಸದಸ್ಯೆ
6. ಆರ್. ರಾಘವೇಂದ್ರಭರಣಿ — ಸದಸ್ಯರು

आरोग्य

8. ಆರೋಗ್ಯ ಸ್ಥಾಯೀ ಸಮಿತಿ

Health

1. ಕೆ. ಎಂ. ಶಿವರಾಜಪ್ಪ — ಅಧ್ಯಕ್ಷರು
2. ಆರ್. ಎಂ. ಮಲ್ಲಿಕಾರ್ಜುನಶೆಟ್ಟಿ — ಸದಸ್ಯರು
3. ಮಹದೇವ — ,,
4. ಶ್ರೀಮತಿ. ಫಿಲೋಮಿನಾ — ಸದಸ್ಯೆ
5. ಹೆಚ್. ಸಿ. ಶಿವಣ್ಣ — ಸದಸ್ಯರು
6. ಟಿ. ಎಂ. ಸಿದ್ದಯ್ಯ — ,,

(ದಿನಾಂಕ 2-10-89 ರಂದು ನಿಧನರಾಗಿರುತ್ತಾರೆ.)

9. ಕೈಗಾರಿಕಾ ಸ್ಥಾಯೀ ಸಮಿತಿ

Industry

1. ಶ್ರೀಮತಿ ಎಂ. ಜಯಶೀಲ — ಅಧ್ಯಕ್ಷರು
2. ಶ್ರೀಮತಿ ಟಿ. ಎಸ್ ರಾಜಮ್ಮ — ಸದಸ್ಯೆ
3. ಆರ್. ನಾಗರಾಜು — ಸದಸ್ಯರು
4. ಬಿ. ಎಂ. ರಾಮು — ,,
5. ಶ್ರೀಮತಿ ಸಿದ್ದಲಿಂಗಮ್ಮ — ಸದಸ್ಯೆ
6. ಕೆ. ಬಿ. ಚನ್ನಯ್ಯ — ಸದಸ್ಯರು

10. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಉಪ ಸಮಿತಿ

women & children

| | | | |
|---|---|---|---|
| 1. | ಶ್ರೀಮತಿ | ಗಂಗಾಂಬಿಕೆ | ಅಧ್ಯಕ್ಷರು |
| 2. | ,, | ಕೃಷ್ಣಾ ಬಾಯಿ | ಸದಸ್ಯೆ |
| 3. | ,, | ಶಶಿಕಲಾ ನಾಗರಾಜ್ | ,, |
| 4. | ,, | ಫಿಲೋಮಿನಾ | ,, |
| 5. | ,, | ಸುನೀತಾ | ,, |
| 6. | ,, | ಸಿದ್ದಲಿಂಗಮ್ಮ | ,, |
| 7, | ,, | ಎಂ. ಜಯಶೀಲಾ | ,, |
| 8. | ,, | ಪಾರ್ವತಮ್ಮ | ,, |
| 9. | ,, | ರಾಜಮ್ಮ | ,, |
| 10. | ,, | ಟಿ. ಎನ್. ರಾಜಮ್ಮ | ,, |
| 11. | ,, | ಮಾದಿಯಮ್ಮಾಳ್ | ,, |
| 12. | ,, | ಕೆ. ಸಿ. ಮಹದೇವಮ್ಮ | ,, |
| 13. | ,, | ಲಕ್ಷ್ಮಮ್ಮ | ,, |
| 14. | ,, | ಕೆ. ಟಿ. ಪದ್ಮಲತಾ | ,, |
| 15. | ,, | ಡಾ|| ಎಂ. ಶೈಲಾ | ,, |
| 16. | ,, | ಶಾರದಮ್ಮ | ,, |

## 1. ಶಿಕ್ಷಣ

1989-90 ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಪ್ರಾಥಮಿಕ ಶಾಲೆಗಳಲ್ಲಿ ಒಟ್ಟು 2,63,704 ವಿದ್ಯಾರ್ಥಿಗಳು ಹಾಗೂ 1,50,278 ಮಂದಿ ವಿದ್ಯಾರ್ಥಿನಿಯರು ಮತ್ತು ಪ್ರೌಢಶಾಲೆಗಳಲ್ಲಿ 52,809 ಮಂದಿ ವಿದ್ಯಾರ್ಥಿಗಳು ಮತ್ತು 31,341 ಮಂದಿ ವಿದ್ಯಾರ್ಥಿನಿಯರು ಈ ಸಾಲಿನಲ್ಲಿ ಶಾಲೆಗೆ ದಾಖಲಾಗಿರುತ್ತಾರೆ. ಪ್ರಾಥಮಿಕ ಶಾಲೆಗಳಲ್ಲಿ, ಸರಾಸರಿ ಹಾಜರಾತಿ ಶೇ. 98.33 ಮತ್ತು ಪ್ರೌಢಶಾಲೆಗಳಲ್ಲಿ ಸರಾಸರಿ ಹಾಜರಾತಿ ಶೇ. 98.14 ಇತ್ತು. ಜಿಲ್ಲೆಯಲ್ಲಿ ಒಟ್ಟು 2,336 ಸರ್ಕಾರಿ ಪ್ರಾಥಮಿಕ ಶಾಲೆಗಳು, 113 ಖಾಸಗಿ ಅನುದಾನಿತ ಶಾಲೆಗಳು ಹಾಗೂ 214 ಅನುದಾನ ರಹಿತ ಪ್ರಾಥಮಿಕ ಶಾಲೆಗಳು ಇದ್ದು, ಒಟ್ಟು 2,663 ಪ್ರಾಥಮಿಕ ಶಾಲೆಗಳು ಇದ್ದವು. ಪ್ರೌಢಶಾಲೆಗಳ ಪೈಕಿ 118 ಸರ್ಕಾರಿ ಶಾಲೆಗಳು, 100 ಖಾಸಗಿ ಅನುದಾನಿತ ಶಾಲೆಗಳು ಹಾಗೂ 32 ಖಾಸಗಿ ಅನುದಾನ ರಹಿತ ಶಾಲೆಗಳು ಇದ್ದವು ಹಾಗೂ 28 ಸರ್ಕಾರಿ ಪದವಿ ಪೂರ್ವ ಕಾಲೇಜುಗಳು, 6 ಖಾಸಗಿ ಅನುದಾನ ಸಹಿತ ಪದವಿ ಪೂರ್ವ ಕಾಲೇಜು, 4 ಅನುದಾನ ರಹಿತ ಪದವಿಪೂರ್ವ ಕಾಲೇಜುಗಳು ಇದ್ದು ಒಟ್ಟು 250 ಪ್ರೌಢಶಾಲೆಗಳು ಮತ್ತು 38 ಪದವಿ ಪೂರ್ವ ಕಾಲೇಜುಗಳು ಇದ್ದವು.

ಸಾರ್ವಜನಿಕ ಶಿಕ್ಷಣ ಇಲಾಖೆಗೆ 1989–90 ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆಯಲ್ಲಿ 2061·54 ಲಕ್ಷ ರೂ. ಗಳು ಬಿಡುಗಡೆ ಆಗಿದ್ದು ಯೋಜನೆ ಲೆಕ್ಕ ಶೀರ್ಷಿಕೆಯಲ್ಲಿ 287·26 ಲಕ್ಷ ರೂ. ಗಳು ಬಿಡುಗಡೆ ಆಗಿದ್ದು ಈ ಹಣವನ್ನು ಆಯಾ ಬಾಬುಗಳಿಗೆ ಖರ್ಚು ಮಾಡಲಾಗಿದೆ.

1989–90 ನೇ ಸಾಲಿನಲ್ಲಿ ಕಪ್ಪು ಹಲಗೆ ಕಾರ್ಯಕ್ರಮದಲ್ಲಿ ಜಿಲ್ಲೆಯ 10 ತಾಲ್ಲೂಕುಗಳನ್ನು ಕಪ್ಪು ಹಲಗೆ ಕಾರ್ಯಕ್ರಮದಡಿಯಲ್ಲಿ ತರಲಾಗಿದೆ. ಈ ಯೋಜನೆಯಡಿಯಲ್ಲಿ 1,481 ಶಾಲೆಗಳಿಗೆ ಪೀಠೋಪಕರಣ ಹಾಗೂ ಪಾಠೋಪಕರಣಗಳಿಗೆ 0·098 ಲಕ್ಷ ರೂ. ಮಂಜೂರಾಗಿದ್ದು ಇವುಗಳನ್ನು ಖರೀದಿಸಿ ಸರಬರಾಜು ಮಾಡಲು ಕ್ರಮ ಕೈಗೊಳ್ಳಲಾಗಿದೆ. ಹಾಗೂ ಮಂಜೂರಾದ 878 ಶಿಕ್ಷಕರ ಹುದ್ದೆಯನ್ನು ನಿಯಮಾನುಸಾರ ಭರ್ತಿಮಾಡಲ ಕ್ರಮ ಕೈಗೊಳ್ಳಲಾಗಿದೆ.

1989–90 ನೇ ಸಾಲಿನಲ್ಲಿ 9 ನೇ ಹಣಕಾಸಿನ ಆಯೋಗವು ಕಪ್ಪು ಹಲಗೆ ಕಾರ್ಯಕ್ರಮದಡಿಯಲ್ಲಿ ಜಿಲ್ಲೆಗೆ 52ಲಕ್ಷ ರೂ. ಗಳು ಬಂದಿದ್ದು ಪ್ರಾಥಮಿಕ ಶಾಲಾ ಕೊಠಡಿಗಳನ್ನು ಕಟ್ಟಿಸಲು ಕ್ರಮ ಕೈಗೊಳ್ಳಲಾಗಿದೆ. ಹಾಗೂ ಕೊಠಡಿಗಳ ನಿರ್ಮಾಣ ಕಾರ್ಯವು ವಿವಿಧ ಹಂತಗಳಲ್ಲಿ ಜಾರಿಯಲ್ಲಿದೆ ಹಣವನ್ನು ಜಿಲ್ಲಾ ಪರಿಷತ್ ಇಂಜಿನಿಯರಿಂಗ್ ವಿಭಾಗದ ಮೂಲಕ ಖರ್ಚುಮಾಡಲಾಗುತ್ತಿದೆ. ಹಾಗೂ ಕೊಠಡಿಗಳು ಭೂಸೇನಾ ನಿಗಮದ ಮೂಲಕ ಕಟ್ಟಿಸಲಾಗುತ್ತಿದೆ.

ಜಿಲ್ಲೆಯಲ್ಲಿ ಮಧ್ಯಾಹ್ನದ ಉಪಹಾರ ಯೋಜನೆಯಡಿಯಲ್ಲಿ (ಹರಿಜನ ಮತ್ತು ಗಿರಿಜನ ಉಪಹಾರ ಯೋಜನೆಯಲ್ಲಿ) 97,310 ಮಕ್ಕಳು ಮಧ್ಯಾಹ್ನ ಉಪಹಾರ ಯೋಜನೆಯಡಿಯಲ್ಲಿ ಉಪಯೋಗ ಹೊಂದಿದ್ದಾರೆ. ಈ ಬಗ್ಗೆ 34·41 ಲಕ್ಷ ರೂ ಖರ್ಚು ಮಾಡಲಾಗಿದೆ.

1989–90 ನೇ ಸಾಲಿನಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಜಿಲ್ಲಾ ಪರಿಷತ್‌ನ ಮಾರ್ಗದರ್ಶನದಲ್ಲಿ ಪ್ರಗತಿಯನ್ನು ಸಾಧಿಸಲಾಗಿದೆ.

1989–90 ನೇ ವರ್ಷದಲ್ಲಿ ಕೆಳಕಂಡಂತೆ ಪ್ರೌಢ ಮತ್ತು ಪ್ರಾಥಮಿಕ ಶಿಕ್ಷಣದ ಶಾಲೆಗಳಲ್ಲಿ ಶಿಕ್ಷಕರ ವೇತನ ಮತ್ತು ಇತರೆ ಖರ್ಚುಗಳು ಈ ರೀತಿ ಇದೆ.

| | ಯೋಜನೇತರ (ಲಕ್ಷಗಳಲ್ಲಿ) | ಯೋಜನೆ (ಲಕ್ಷಗಳಲ್ಲಿ) |
|---|---|---|
| ಪ್ರಾಥಮಿಕ ಶಿಕ್ಷಣ | 1981·78 | 95·64 |
| ಪ್ರೌಢ ಶಿಕ್ಷಣ | 847·01 | 33·70 |
| | 2828·79 | 129·34 |

ಈ ಜಿಲ್ಲೆಯಲ್ಲಿ 89–90 ರಲ್ಲಿ ಪ್ರಾಥಮಿಕ ಶಾಲೆಯ ಶಿಕ್ಷಕರು 7689 ಮತ್ತು 2090 ಮಂದಿ ಪ್ರೌಢಶಾಲಾ ಶಿಕ್ಷಕರು ಇದ್ದು ಕಾರ್ಯವನ್ನು ನಿರ್ವಹಿಸುತ್ತಿದ್ದಾರೆ.

## 2. ವಯಸ್ಕರ ಶಿಕ್ಷಣ

ವಯಸ್ಕರ ಶಿಕ್ಷಣ ಕಾರ್ಯಕ್ರಮವು ಮೈಸೂರು ಜಿಲ್ಲೆಯಲ್ಲಿ 1978 ರಿಂದ ಜಾರಿಯಲ್ಲಿದ್ದು ಜಿಲ್ಲೆಯಲ್ಲಿನ 15 ರಿಂದ 35 ವರ್ಷ ವಯಸ್ಸಿನ ಅನಕ್ಷರಸ್ಥ ವಯಸ್ಕರಿಗೆ ವೃತ್ತಿ ಪರಶಿಕ್ಷಣ ನೀಡುವುದು ಈ ಕಾರ್ಯಕ್ರಮದ ಉದ್ದೇಶ.

### ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತಾ ಯೋಜನೆ

ಗ್ರಾಮೀಣಕ್ರಿಯಾತ್ಮಕ ಸಾಕ್ಷರತಾ ಯೋಜನೆಯು ಕೇಂದ್ರ ಸರ್ಕಾರದ ಅನುದಾನದಿಂದ ನಡೆಯುತ್ತಿರುವ ಕಾರ್ಯಕ್ರಮ. ಮೈಸೂರು ಜಿಲ್ಲೆಯ 7 ತಾಲ್ಲೂಕುಗಳು ಚಾಮರಾಜನಗರ ಮತ್ತು ಹುಣಸೂರು ಯೋಜನೆಯಡಿ ಕಾರ್ಯ ನಿರ್ವಹಿಸುತ್ತಿದ್ದು 88-89 ನೇ ಸಾಲಿನಲ್ಲಿ ತೆರೆಯಲಾದ 600 ಕೇಂದ್ರಗಳು 89–90 ನೇ ಸಾಲಿಗೂ ಮುಂದುವರಿಸಲಾಗಿದೆ. ಈ ಕಾರ್ಯಕ್ರಮದಡಿಯಲ್ಲಿ 27·77 ಲಕ್ಷ ರೂ. ಗಳ ಅನುದಾನ ಬಿಡುಗಡೆಯಾಗಿದ್ದು ಅದರಲ್ಲಿ 13·39 ಲಕ್ಷ ರೂ ಗಳನ್ನು ವಿನಿಯೋಗಿಸಲಾಗಿದೆ.

### ಜನಶಿಕ್ಷಣ ನಿಲಯ

1988–89 ನೇ ಸಾಲಿನ ವಯಸ್ಕರ ಶಿಕ್ಷಣ ಕ್ಷೇತ್ರದಲ್ಲಿ ತರಲಾದ ಮಹತ್ವದ ಬದಲಾವಣೆ ಎಂದರೆ ಜನಶಿಕ್ಷಣ ನಿಲಯಗಳ ಸ್ಥಾಪನೆ. ರಾಷ್ಟ್ರೀಯ ಸಾಕ್ಷರತಾ ನಿಯೋಗದಡಿಯಲ್ಲಿ ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತಾ ಯೋಜನೆ ಅಸ್ತಿತ್ವದಲ್ಲಿರುವ ಕಡೆ ಜನಶಿಕ್ಷಣ ನಿಲಯಗಳನ್ನು ಕೇಂದ್ರ ಸರ್ಕಾರದ ಅನುದಾನದಿಂದ ಸ್ಥಾಪಿಸಲಾಗಿದೆ. ಚಾಮರಾಜನಗರ ಯೋಜನೆಯಲ್ಲಿ 29 ಮತ್ತು ಹುಣಸೂರು ಯೋಜನೆಯಲ್ಲಿ 24 ಜನಶಿಕ್ಷಣ ನಿಲಯಗಳು ಕಾರ್ಯನಿರ್ವಹಿಸುತ್ತಿದ್ದು ಇವುಗಳಿಗೆ 7·00 ಲಕ್ಷ ರೂ. ಅನುದಾನ ಬಿಡುಗಡೆಯಾಗಿದ್ದು 2·45 ಲಕ್ಷ ರೂ. ಗಳನ್ನು ವಿನಿಯೋಗಿಸಲಾಗಿದೆ.

### ಅಕ್ಷರಸೇನೆ ಕಾರ್ಯಕ್ರಮ

ರಾಜ್ಯ ಸರ್ಕಾರದ ಅನುದಾನದಿಂದ ನಡೆಯುವ ಯೋಜನೆಯಾಗಿದ್ದು, ಅತ್ಯಲ್ಪ ಕಾಲದಲ್ಲಿ ಗ್ರಾಮೀಣ ಅನಕ್ಷರಸ್ಥ ಪುರುಷ ಮತ್ತು ಮಹಿಳೆಯರಲ್ಲಿ ಸಾಕ್ಷರತೆಯನ್ನುಂಟುಮಾಡುವ ಉದ್ದೇಶ ಹೊಂದಿದೆ. 89–90ನೇ ಸಾಲಿನಲ್ಲಿ 190 ಕೇಂದ್ರಗಳನ್ನು ಪ್ರಾರಂಭಿಸಿದ್ದು 5700 ಜನ ಅನಕ್ಷರಸ್ಥರನ್ನು ದಾಖಲು ಮಾಡಿಕೊಂಡು 2480 ಜನರನ್ನು ಸಾಕ್ಷರಸ್ಥರನ್ನಾಗಿ ಮಾಡಲಾಗಿದೆ. ಈ ಕಾರ್ಯಕ್ರಮದಡಿಯಲ್ಲಿ 3·88 ಲಕ್ಷ ರೂ ಗಳ ಅನುದಾನ ಬಿಡುಗಡೆಯಾಗಿದ್ದು ಅದರಲ್ಲಿ 2·83099 ರೂ.ಗಳನ್ನು ಖರ್ಚು ಮಾಡಲಾಗಿದೆ.

### ವಯಸ್ಕರ ಶಿಕ್ಷಣ ಕಾರ್ಯಕ್ರಮ : (ಕಛೇರಿ)

ಈ ಯೋಜನೆಗೆ 2·00 ಲಕ್ಷ ರೂ. ಗಳ ಅನುದಾನ ಬಿಡುಗಡೆಯಾಗಿದ್ದು ಇದರಲ್ಲಿ 1·74 ಲಕ್ಷ ರೂ.ಗಳು ಖರ್ಚು ಮಾಡಲಾಗಿದೆ.

1989–90ನೇ ಸಾಲಿನಲ್ಲಿ ವಯಸ್ಕರ ಶಿಕ್ಷಣ ಕಾರ್ಯಕ್ರಮದ ಸಲುವಾಗಿ 40·65 ಲಕ್ಷ ರೂ.ಗಳ ಅನುದಾನದಲ್ಲಿ 20·41 ಲಕ್ಷ ರೂ. ಗಳನ್ನು ವಿನಿಯೋಗಿಸಿ ಒಟ್ಟು 790 ಕೇಂದ್ರಗಳಲ್ಲಿ 26,700 ಅನಕ್ಷರಸ್ಥರನ್ನು ದಾಖಲು ಮಾಡಿಕೊಳ್ಳಲಾಗಿತ್ತು.

| | ಅನುದಾನ (ಲಕ್ಷಗಳಲ್ಲಿ) | ಖರ್ಚು (ಲಕ್ಷಗಳಲ್ಲಿ) |
|---|---|---|
| ಗ್ರಾ. ಕ್ರಿ. ಸಾ. ಯೋಜನೆ ಚಾಮರಾಜನಗರ ಮತ್ತು ಹುಣಸೂರು. | 27·77 | 13·39 |
| ಜನಶಿಕ್ಷಣ ನಿಲಯ | 07·00 | 02·45 |
| ಅಕ್ಷರಸೇನೆ | 03·88 | 02·83 |
| ವಯಸ್ಕರ ಶಿಕ್ಷಣ ಸಾಕ್ಷರತಾ ಯೋಜನೆ (ಕಛೇರಿ) | 02·00 | 01·74 |
| | 40·65 | 20·41 |

# 3. ಕ್ರೀಡಾ ಮತ್ತು ಯುವಜನ ಸೇವೆ

## 1989–90 ನೇ ಸಾಲಿನ ಮೈಸೂರು ಜಿಲ್ಲಾ ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಆಡಳಿತಾತ್ಮಕ ವರದಿ

1989–90 ನೇ ಸಾಲಿನಲ್ಲಿ ಇಲಾಖಾ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಯೋಜನೆ ಮತ್ತು ಯೋಜನೇತರ ಬಾಬುಗಳಿಗೆ ಬಿಡುಗಡೆ ಮಾಡಿರುವ ಹಣದ ವಿವರ ಈ ಕೆಳಗಿನಂತಿದೆ :

| | |
|---|---|
| ಯೋಜನೆ | 3·35 ಲಕ್ಷ ರೂ. ಗಳು |
| ಯೋಜನೇತರ | 4·19 ಲಕ್ಷ ರೂ. ಗಳು |

ಯೋಜನೆ ಮತ್ತು ಯೋಜನೇತರ ಬಾಬುಗಳಡಿ 1989–90ನೇ ಸಾಲಿನಲ್ಲಿ ಒಟ್ಟು 186 ಯುವಕ, ಯುವತಿ ಸಂಘಗಳು, ಹವ್ಯಾಸಿ ಸಂಘಗಳು, ಕ್ರೀಡಾ ಸಂಘಗಳು ಮತ್ತು ಶಾಲಾ ಸಂಸ್ಥೆಗಳಿಗೆ 3·04 ಲಕ್ಷ ರೂ. ಗಳ ಅನುದಾನವನ್ನು ನೀಡಲಾಗಿದೆ.

ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಯುವಜನ ಮೇಳಗಳನ್ನು ನಡೆಸಲು ರೂ. 0·24 ಲಕ್ಷ ವಿನಿಯೋಗಿಸ ಲಾಗಿದೆ.

ಮೈಸೂರು ಜಿಲ್ಲೆಯಲ್ಲಿ 484 ಯುವಕ ಸಂಘಗಳು, 28 ಯುವತಿ ಸಂಘಗಳು ಮತ್ತು 91 ಹವ್ಯಾಸಿ ಸಂಘಗಳು ಅಸ್ತಿತ್ವದಲ್ಲಿವೆ.

### ತರಬೇತಿ

ಬೆಂಗಳೂರು ಜಿಲ್ಲೆ ವಿದ್ಯಾನಗರದಲ್ಲಿರುವ ಜಯ ಪ್ರಕಾಶ್‌ನಾರಾಯಣ ತರಬೇತಿ ಕೇಂದ್ರಕ್ಕೆ 58 ಮಂದಿ ಗ್ರಾಮೀಣ ಯುವಕರನ್ನು ಹಾಗೂ ಕುಂಬಳಗೂಡಿನಲ್ಲಿರುವ ತರಬೇತಿ ಶಿಬಿರಕ್ಕೆ 26 ಮಂದಿ ಮಹಿಳೆಯರನ್ನು ಯುವಕ–ಯುವತಿ ಮುಂದಾಳುಗಳ ತರಬೇತಿ ಶಿಬಿರಕ್ಕಾಗಿ ಆಯ್ಕೆಮಾಡಿ ಕಳುಹಿಸಲಾಗಿತ್ತು. ಹಾಗೆಯೆ ಇಲಾಖಾ ವತಿಯಿಂದ ನಡೆದ ಕರ್ನಾಟಕ ದರ್ಶನ ಪ್ರವಾಸಕ್ಕಾಗಿ ಮೈಸೂರು ಜಿಲ್ಲೆಯಿಂದ 11 ಮಂದಿ ಯುವಕರು ಮತ್ತು 11 ಮಂದಿ ಯುವತಿಯರನ್ನು ಆಯ್ಕೆಮಾಡಿ ಕಳುಹಿಸ ಲಾಗಿತ್ತು.

### ಯುವಜನ ಮೇಳ

1989–90ನೇ ಸಾಲಿನಲ್ಲಿ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಯುವಜನ ಮೇಳಗಳನ್ನು ನಡೆಸಲಾಯಿತು. ತಾಲ್ಲೂಕು ಮಟ್ಟದ ಯುವಜನ ಮೇಳ ನಡೆಸಲು ಪ್ರತಿ ತಾಲ್ಲೂಕಿಗೆ ತಲಾ 1000-00 ರೂ ಗಳನ್ನು ಜಿಲ್ಲಾ ಮಟ್ಟದ ಯುವಜನ ಮೇಳಗಳನ್ನು ನಡೆಸಲು 12,000–00 ರೂ. ಗಳನ್ನು ನಿಗದಿಪಡಿಸಲಾಗಿತ್ತು.

### ಕ್ರೀಡಾಕೂಟಗಳು

ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ಗ್ರಾಮೀಣ ಕ್ರೀಡಾಕೂಟ ಮತ್ತು ಮಹಿಳಾ ಕ್ರೀಡಾಕೂಟಗಳನ್ನು ಸಹ ನಡೆಸಲಾಯಿತು. ಮೇಲಿನ ಕ್ರೀಡಾಕೂಟಗಳಿಗೆ ತಾಲ್ಲೂಕು ಮಟ್ಟದಲ್ಲಿ 400–00 ರೂ. ಮತ್ತು ಜಿಲ್ಲಾ ಮಟ್ಟ ನಡೆಸಲು 3000–00 ರೂ.ಗಳನ್ನು ಭಾರತ ಕ್ರೀಡಾ ಪ್ರಾಧಿಕಾರದಿಂದ ಒದಗಿಸಲಾಗಿತ್ತು. ಅಲ್ಲದೆ ತಾಲ್ಲೂಕು ಮತ್ತು ಜಿಲ್ಲಾ ಮಟ್ಟದ ದಸರ ಕ್ರೀಡಾಕೂಟಗಳನ್ನು ಸಹ ನಡೆಸಲಾಯಿತು.

# 4. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ಆಡಳಿತ ವರದಿ**

ಮೈಸೂರು ಜಿಲ್ಲೆಯಲ್ಲಿ 9 ಸಾರ್ವಜನಿಕ ಆಸ್ಪತ್ರೆಗಳು, 72 ಪ್ರಾಥಮಿಕ ಆರೋಗ್ಯ ಕೇಂದ್ರಗಳು, 76 ಪ್ರಾಥಮಿಕ ಆರೋಗ್ಯ ಘಟಕಗಳು, 13 ಹೆರಿಗೆ ಆಸ್ಪತ್ರೆಗಳು, ಒಂದು ಜಿಲ್ಲಾ ಪ್ರಯೋಗಾಲಯ, ಒಂದು ಕುಷ್ಠ ರೋಗ ತರಬೇತಿ ಕೇಂದ್ರ, 2 ಕುಷ್ಠ ರೋಗ ನಿಯಂತ್ರಣ ಕೇಂದ್ರಗಳು, ಒಂದು ಜಿಲ್ಲಾ ಕ್ಷಯರೋಗ ಕೇಂದ್ರ, 5 ಸಂಚಾರಿ ಗಿರಿಜನ ಘಟಕಗಳು ಹಾಗೂ 724 ಉಪ ಕೇಂದ್ರಗಳು ಕಾರ್ಯನಿರ್ವಹಿಸುತ್ತಿವೆ. ಇಲ್ಲಿ ನೇಮಕವಾಗಿರುವ 306 ವೈದ್ಯಾಧಿಕಾರಿಗಳು, 660 ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು, 56 ಶುಶ್ರೂಷಿ ದಾದಿಯರು, 216 ಪುರುಷ ಆರೋಗ್ಯ ಕಾರ್ಯಕರ್ತರುಗಳು ಇತ್ಯಾದಿ ಸಿಬ್ಬಂದಿಗಳ ಮೂಲಕ ಗ್ರಾಮಾಂತರ ಪ್ರದೇಶಗಳಲ್ಲಿ ಆರೋಗ್ಯ ಸೇವಾ ಸೌಲಭ್ಯಗಳನ್ನು ನೀಡಲಾಗುತ್ತಿದೆ.

10,35,480 ಹೊರ ರೋಗಿಗಳು, 2,24,100 ಒಳ ರೋಗಿಗಳಿಗೆ ವಿವಿಧ ಖಾಯಿಲೆಗಳಿಗೆ ಚಿಕಿತ್ಸೆ ನೀಡಲಾಗುತ್ತಿದೆ. ರಾಷ್ಟ್ರೀಯ ಕಾರ್ಯಕ್ರಮಗಳಿಗೆ ಅನುಗುಣವಾಗಿ 3,44,652 ಜ್ವರದ ಪ್ರಕರಣಗಳನ್ನು ಪರೀಕ್ಷಿಸಿ 3,39,479 ರಕ್ತ ಲೇಪನ ತೆಗೆದು ಹಾಗೂ ಸೂಕ್ಷ್ಮದರ್ಶಕಗಳ ಮೂಲಕ ಪರೀಕ್ಷಿಸಿ 1933 ಮಲೇರಿಯಾ ಪ್ರಕರಣಗಳನ್ನು ಪತ್ತೆ ಹಚ್ಚಿ ಅವರುಗಳಿಗೆ ಸೂಕ್ತ ಚಿಕಿತ್ಸೆ ನೀಡಿ ಮಲೇರಿಯಾ ರೋಗದಿಂದ ವಿಮುಕ್ತರನ್ನಾಗಿ ಮಾಡಿದೆ. ಮಲೇರಿಯಾ ರೋಗ ಸಂಪೂರ್ಣ ಹತೋಟಿಯಲ್ಲಿದೆ.

ಜಿಲ್ಲೆಯಲ್ಲಿ 14,857 ಅನುಮಾನಾಸ್ಪದ ರೋಗಿಗಳ ಕಫ ಪರೀಕ್ಷಿಸಿ 2416 ಕ್ಷಯ ರೋಗಿಗಳನ್ನು ಪತ್ತೆ ಹಚ್ಚಲಾಗಿದೆ ಹಾಗೂ ಕ್ಷ-ಕಿರಣ ಮೂಲಕ 4703 ಕ್ಷಯ ರೋಗಿಗಳನ್ನು ಪತ್ತೆ ಹಚ್ಚಲಾಗಿದೆ. ಜಿಲ್ಲೆಯಲ್ಲಿ ಒಟ್ಟು 7119 ಕ್ಷಯ ರೋಗಿಗಳು ಈಗ ಹಾಲಿ ಕ್ಷಯ ರೋಗಕ್ಕೆ ಉತ್ತಮ ಚಿಕಿತ್ಸೆ ಪಡೆಯುತ್ತಲಿದ್ದಾರೆ.

ಕುಷ್ಠ ರೋಗವು ಈ ಜಿಲ್ಲೆಯಲ್ಲಿ ಚಾಮರಾಜನಗರ, ಯಳಂದೂರು, ಕೊಳ್ಳೇಗಾಲ, ಗುಂಡ್ಲುಪೇಟೆ ಮತ್ತು ಟಿ. ನರಸೀಪುರ ತಾಲ್ಲೂಕುಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಂಡು ಬಂದಿದೆ. ಈ ಜಿಲ್ಲೆಯಲ್ಲಿ ಒಟ್ಟು 3210 ಕುಷ್ಠ ರೋಗಿಗಳನ್ನು ಈ ಸಾಲಿನಲ್ಲಿ ಪತ್ತೆ ಹಚ್ಚಿ ಒಟ್ಟು 9855 ರೋಗಿಗಳು ಜಿಲ್ಲೆಯಲ್ಲಿ ಉಚಿತ ಚಿಕಿತ್ಸೆ ಪಡೆಯುತ್ತಿದ್ದಾರೆ.

ಭಾರತೀಯ ವೈದ್ಯ ಪದ್ಧತಿ–2210 ಯೋಜನೆಯಲ್ಲಿ 3·82 ಲಕ್ಷ ರೂ.ಗಳು, ಗ್ರಾಮೀಣ ಆರೋಗ್ಯ ಮತ್ತು ಕುಟುಂಬ ಕಲ್ಯಾಣ–2211 ಯೋಜನೆಯಲ್ಲಿ 169·96 ಲಕ್ಷ ರೂ.ಗಳು, 2225 ಯೋಜನೆಯಲ್ಲಿ 25·50 ಲಕ್ಷ ರೂ.ಗಳು, 2235 ಯೋಜನೆಯಲ್ಲಿ 7·27 ಲಕ್ಷ ರೂ.ಗಳು, 2210 ಯೋಜನೆಯಲ್ಲಿ 67·55 ಲಕ್ಷ ರೂ.ಗಳು, 2210 ಯೋಜನೇತರ ಶೀರ್ಷಿಕೆಯಲ್ಲಿ 50·36 ಲಕ್ಷ ರೂ.ಗಳು ಒಟ್ಟು ಬಿಡುಗಡೆಯಾಗಿದೆ. ಎಲ್ಲಾ ಶೀರ್ಷಿಕೆಗಳಲ್ಲೂ ಪ್ರಗತಿ ಸಾಧಿಸಲಾಗಿದೆ.

ಕುಷ್ಠ ರೋಗಕ್ಕೆ ವರಪ್ರಧಾನವಾಗಿರುವ ಬಹು ಔಷಧಗಳ ಚಿಕಿತ್ಸೆಯನ್ನು ಇಲಾಖೆಯ ಮೂಲಕವೂ, ಕೆಲವು ಸೇವಾ ಸಂಸ್ಥೆಗಳಾದ ಕರುಣಾ ಟ್ರಸ್ಟ್, ಅಸಿಸಿ ಸೇವಾ ನಿಲಯ, ಗಾಂಧಿಸ್ಮಾರಕ ಕುಷ್ಠರೋಗ ಸಂಸ್ಥೆ ಮೂಲಕವೂ ಕೂಡ ರೋಗಿಗಳನ್ನು ಪತ್ತೆ ಹಚ್ಚುವುದು ಹಾಗೂ ಉಚಿತ ಬಹು ಔಷಧಿ ಚಿಕಿತ್ಸೆಯನ್ನು ರೋಗಿಯ ಮನೆಯ ಬಾಗಿಲಿಗೇ ತಲುಪಿಸಲಾಗುತ್ತಿದೆ. ಈಗಾಗಲೇ ಸುಮಾರು 6724 ರೋಗಿಗಳು ಕುಷ್ಠ ರೋಗದಿಂದ ವಿಮುಕ್ತಿ ಹೊಂದಿರುತ್ತಾರೆ.

ಹಿಂದಿನ ವರ್ಷಗಳಿಗೆ ಹೋಲಿಸಿ ನೋಡಿದಾಗ, ಈ ಜಿಲ್ಲೆಯಲ್ಲಿ ಕಾಲರಾ ರೋಗದ ಸೋಂಕು ಇರುವುದಿಲ್ಲ. ಹಾಗೂ ಅಲ್ಲಲ್ಲಿ ವಾಂತಿ ಬೇಧಿ ಪ್ರಕರಣಗಳು ಕಾಣಿಸಿಕೊಂಡಿದ್ದು ಅವುಗಳನ್ನು ತಡೆಗಟ್ಟಿ ಸೂಕ್ತ ಚಿಕಿತ್ಸೆಯನ್ನು ನೀಡಿ ಕಾಲರಾ, ವಾಂತಿ ಬೇಧಿ ರೋಗಗಳನ್ನು ಈ ಜಿಲ್ಲೆಯಲ್ಲಿ ನಿಯಂತ್ರಿಸಲಾಗಿದೆ.

ಜಿಲ್ಲೆಯಲ್ಲಿ ಸರ್ಕಾರಿ ಸಂಚಾರಿ ನೇತ್ರ ಚಿಕಿತ್ಸಾ ಘಟಕ ಹಾಗೂ ಸ್ವಯಂಸೇವಾ ಸಂಸ್ಥೆಗಳ ಸಹಾಯದಿಂದ 3776 ರೋಗಿಗಳಿಗೆ ಶಸ್ತ್ರ ಚಿಕಿತ್ಸೆ ನಡೆಸಿ ಕಣ್ಣಿನ ಪೊರೆ ತೆಗೆದು ದೃಷ್ಟಿ ಮರುಕಳಿಸುವಂತೆಮಾಡಿ ಅಂಧತ್ವ ನಿವಾರಣೆಯಲ್ಲಿ ಉತ್ತಮ ಸಾಧನೆ ಸಾಧಿಸಲಾಗಿದೆ.

## ಕುಟುಂಬ ಕಲ್ಯಾಣ ಕಾರ್ಯಕ್ರಮಗಳು

ಮೈಸೂರು ಜಿಲ್ಲೆಯು ಕರ್ನಾಟಕ ರಾಜ್ಯದಲ್ಲಿ 1987-88 ರಿಂದ 1989-90ರ ವರೆವಿಗೂ ರಾಜ್ಯದಲ್ಲಿ ಸತತವಾಗಿ 3 ವರ್ಷಗಳಲ್ಲೂ ಕೂಡ ಪ್ರಥಮ ಸ್ಥಾನವನ್ನು ಉಳಿಸಿಕೊಂಡು ಕರ್ನಾಟಕ ರಾಜ್ಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಇತಿಹಾಸದಲ್ಲಿ ಪ್ರಥಮ ಸ್ಥಾನವನ್ನು ಉಳಿಸಿಕೊಂಡಿರುವ "ಏಕೈಕ ಜಿಲ್ಲೆ" ಮೈಸೂರು ಜಿಲ್ಲೆಯಾಗಿದೆ. ಈ ಸಾಧನೆಗೆ ಕರ್ನಾಟಕ ಸರ್ಕಾರವು ಪ್ರಶಸ್ತಿ ನೀಡಿ ಗೌರವಿಸಿದೆ.

| | ಗುರಿ | ಸಾಧನೆ | ಶೇಕಡ |
|---|---|---|---|
| 1989-90 | | | |
| ಸಂತಾನ ಹರಣ | | | |
| ಶಸ್ತ್ರ ಚಿಕಿತ್ಸೆ | 31,125 | 35,750 | 114·8 |

ಜಿಲ್ಲೆಯಲ್ಲಿ ಮಾರ್ಚ್ 90ರ ಅಂತ್ಯಕ್ಕೆ 4,17,650 ದಂಪತಿಗಳ ಪೈಕಿ 2,36,739 ಅರ್ಹ ದಂಪತಿಗಳು ಶಾಶ್ವತ ಹಾಗೂ ತಾತ್ಕಾಲಿಕ ವಿಧಾನಗಳಿಂದ ಕುಟುಂಬ ಕಲ್ಯಾಣದ ಕ್ರಮ ಅನುಸರಿಸುತ್ತಿದ್ದಾರೆ. ಈ ಪ್ರಕಾರ ಜಿಲ್ಲೆಯ ಶೇಕಡಾವಾರು ಅರ್ಹ ದಂಪತಿಗಳ ರಕ್ಷಣೆಯು ಸುಮಾರು 56·6 ಆಗಲಿದೆ. (ಕಿ. ಶ. 2000ದ ಇಸವಿಗೆ ಅರ್ಹ ದಂಪತಿಗಳ ಶೇಕಡಾವಾರು 60 ಅರ್ಹ ದಂಪತಿಗಳನ್ನು ಕುಟುಂಬ ಕಲ್ಯಾಣ ಕಾರ್ಯಕ್ರಮಗಳಲ್ಲಿ ಅಳವಡಿಸುವ ಗುರಿಯಾಗಿರುತ್ತದೆ). ವಿಶ್ವ ಆರೋಗ್ಯ ಸಂಸ್ಥೆಯ ಘೋಷಣೆಯ ಪ್ರಕಾರ ಕ್ರಿ. ಶ. 2000ದ ವೇಳೆಗೆ ಭಾರತದಲ್ಲಿ ಶೇ. 60 ರಷ್ಟು ಅರ್ಹ ದಂಪತಿಗಳು ಕುಟುಂಬ ಕಲ್ಯಾಣ ಕಾರ್ಯಕ್ರಮದ ರಕ್ಷಣೆ ಹೊಂದಬೇಕಾಗಿರುತ್ತದೆ. ಮೈಸೂರು ಜಿಲ್ಲೆಯು 1990ರ ಮಾರ್ಚ್ ಅಂತ್ಯಕ್ಕೆ ಶೇ. 56·4ರಷ್ಟು ಅರ್ಹ ದಂಪತಿಗಳು ಕುಟುಂಬ ಕಲ್ಯಾಣ ಕಾರ್ಯಕ್ರಮದ ವಿವಿಧ ವಿಧಾನಗಳಿಂದ ರಕ್ಷಿತಗೊಂಡಿರುತ್ತಾರೆ. ಆದುದರಿಂದ ಈ ಜಿಲ್ಲೆಯು ಕ್ರಿ. ಶ. 1995ಕ್ಕೆ ಶೇ. 60ರಷ್ಟು ಅರ್ಹ ದಂಪತಿಗಳು ಕುಟುಂಬ ಕಲ್ಯಾಣ ವಿಧಾನಗಳನ್ನು ಅನುಸರಿಸಿ ರಕ್ಷಣೆ ಹೊಂದುವುದರಲ್ಲಿ ಸಂಶಯವೇ ಇಲ್ಲವೆಂದು ಘೋಷಿಸಬಹುದಾಗಿದೆ.

## ತಾಯಿ ಮಕ್ಕಳ ರಕ್ಷಣೆ

### ಒಂದು ವರ್ಷದ ಒಳಪಟ್ಟ ಮಕ್ಕಳಿಗೆ ಲಸಿಕೆ ಕಾರ್ಯಕ್ರಮ

| | | |
|---|---|---|
| 1) ಬಿ.ಸಿ.ಜಿ. | 80,961 | ಮಕ್ಕಳಿಗೆ ನೀಡಲಾಗಿದೆ. |
| 2) ಡಿ.ಪಿ.ಟಿ. | 71,079 | ” |
| 3) ಪೋಲಿಯೋ | 66,212 | ” |
| 4) ದಢಾರನಿರೋಧ | 49,617 | ” |
| 5) ಗರ್ಭಿಣಿ ಸ್ತ್ರೀಯರಿಗೆ ಟಿಟನಸ್ ವಿರುದ್ಧ | 71,441 | ಮಹಿಳೆಯರಿಗೆ ಚುಚ್ಚುಮದ್ದು ನೀಡಲಾಗಿದೆ. |

ಲಸಿಕೆಗಳ ಗುಣಮಟ್ಟವನ್ನು ಕಾಪಾಡಲು ವಿಶ್ವ ಆರೋಗ್ಯ ಸಂಸ್ಥೆಯ ಮಕ್ಕಳ ಕಲ್ಯಾಣ ನಿಧಿ ಸಂಸ್ಥೆಯು ಸಾಕಷ್ಟು ಉಚಿತ ಉಪಕರಣಗಳನ್ನು ನೀಡಿರುತ್ತದೆ.

## ಅಭಿವೃದ್ಧಿ ಕಾರ್ಯಕ್ರಮಗಳು

32 ಪ್ರಾಥಮಿಕ ಆರೋಗ್ಯ ಘಟಕಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನಾಗಿ ಮೇಲ್ದರ್ಜೆಗೆ ಏರಿಸಲಾಗಿದೆ.

## ನೂತನ ಆಸ್ಪತ್ರೆಗಳ ಉದ್ಘಾಟನೆ

ಹೆಗ್ಗಡದೇವನಕೋಟೆಯಲ್ಲಿ 50 ಹಾಸಿಗೆಗಳ ಸುಸಜ್ಜಿತ ಸಾರ್ವಜನಿಕ ಆಸ್ಪತ್ರೆಯನ್ನು ಸುಮಾರು 45 ಲಕ್ಷ ರೂ. ಗಳ ವೆಚ್ಚದಲ್ಲಿ ನಿರ್ಮಿಸಿ ಸಾರ್ವಜನಿಕರ ಆರೋಗ್ಯ ಸೇವಾ ಸೌಲಭ್ಯ ನೀಡಲು ಅಕ್ಟೋಬರ್ 89ರಲ್ಲಿ ತೆರೆಯಲಾಗಿದೆ.

ಟಿ. ನರಸೀಪುರದಲ್ಲಿ 30 ಹಾಸಿಗೆಗಳ ಸಾರ್ವಜನಿಕ ಆಸ್ಪತ್ರೆಯನ್ನು ಸುಮಾರು 27 ಲಕ್ಷ ರೂ. ವೆಚ್ಚದಲ್ಲಿ ನೂತನವಾಗಿ ನಿರ್ಮಿಸಿ ಸಾರ್ವಜನಿಕರ ಆರೋಗ್ಯ ಸೇವೆಗೆ ಒಪ್ಪಿಸಲಾಗಿದೆ.

## ಮೈಸೂರು ಜಿಲ್ಲಾ ಪರಿಷತ್‌ನ ವಿಶೇಷ ಯೋಜನೆ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕನಿಷ್ಟ ಅವಶ್ಯಕತೆ ಮೇರೆಗೆ ಮಂಜೂರಾದ ಕೆಲವು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಕಟ್ಟಡವಿಲ್ಲದೆ ಇರುವುದನ್ನು ಪರಿಗಣಿಸಿ ಮೈಸೂರು ಜಿಲ್ಲಾ ಪರಿಷತ್ ತನ್ನದೆ ಆದ ಒಂದು ಹೊಸ ಮಾದರಿಯನ್ನು ರೂಪಿಸಿ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಬೇಕಾದ ಅಗತ್ಯ ಸೌಲಭ್ಯಗಳಾದ ವೈದ್ಯರ ಪರೀಕ್ಷಾ ಕೊಠಡಿ, ಪ್ರಯೋಗಾಲಯ, ಔಷಧಾಲಯ, ಔಷಧ ಉಗ್ರಾಣ, ಪ್ರಸೂತಿ ಕೊಠಡಿ, ಶಸ್ತ್ರ ಚಿಕಿತ್ಸಾ ಕೊಠಡಿ, ಕಚೇರಿ ಹಾಗೂ ಸಮಾಕ್ಷ ಕೊಠಡಿ, ಇವುಗಳ ಜೊತೆಗೆ 20 ಹಾಸಿಗೆಗಳುಳ್ಳ ಕೊಠಡಿಯನ್ನು ಕೇವಲ 6·6 ಲಕ್ಷ ರೂ. ಗಳಲ್ಲಿ ಕರ್ನಾಟಕ ರಾಜ್ಯದಲ್ಲೆ ಪ್ರಪ್ರಥಮ ಪ್ರಯೋಗಾತ್ಮಕವಾಗಿ ನೂತನ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ನಿರ್ಮಿಸಲಾಗುತ್ತಿದೆ. ಈ ಹೊಸ ವಿನ್ಯಾಸದ ಮಾದರಿಯನ್ನು ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರಗಳು ಶ್ಲಾಘಿಸಿವೆ. ಇದೇ ರೀತಿ ಮುಂದೆಯೂ ಕೂಡ ಕಟ್ಟಡವಿಲ್ಲದೆ ಇರುವ ಸ್ಥಳಗಳಲ್ಲಿ ಹಂತಹಂತವಾಗಿ ನೂತನ ಕಟ್ಟಡ ನಿರ್ಮಿಸಲು ಯೋಜನೆಯನ್ನು ರೂಪಿಸಿಕೊಳ್ಳಲಾಗಿದೆ.

## ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸಾ ಕೊಠಡಿಗಳು

ಈ ಜಿಲ್ಲೆಯಲ್ಲಿ ಕುಟುಂಬ ಕಲ್ಯಾಣ ಕಾರ್ಯಕ್ರಮವು ಬಹಳ ಚೆನ್ನಾಗಿ ನಡೆದುಕೊಂಡು ಬಂದಿರುವುದರಿಂದ ತಾಲ್ಲೂಕು ಕೇಂದ್ರ ಸ್ಥಾನವನ್ನು ಬಿಟ್ಟು ಗ್ರಾಮಾಂತರ ಪ್ರದೇಶಗಳಲ್ಲಿರುವ ಹಾಲಿ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ವಿಶೇಷವಾಗಿ 20 ಹಾಸಿಗೆಗಳ ಒಂದು ಕೊಠಡಿಯ ಜೊತೆಗೆ ಶಸ್ತ್ರ ಚಿಕಿತ್ಸಾ ಕೊಠಡಿ ಹಾಗೂ ಪ್ರಸೂತಿ ಕೊಠಡಿಗಳನ್ನೊಳಗೊಂಡಂತೆ ಸರಾಸರಿ 3·7ಲಕ್ಷ ರೂ.ಗಳ ಅಂದಾಜಿನಲ್ಲಿ ಜಯಪುರ, ಯಳಂದೂರು, ಕಾಗಲವಾಡಿ ಹುಲ್ಲಹಳ್ಳಿ, ಅಂತರಸಂತೆ, ಗಾವಡಗೆರೆ, ರಾವಂದೂರು ಹಾಗೂ ಹೊಸೂರು ಪ್ರಾಥಮಿಕ ಆರೋಗ್ಯ ಕೇಂದ್ರಗಳಿಗೆ ಹೊಂದಿಕೊಂಡಂತೆ ನಿರ್ಮಿಸಲಾಗುತ್ತಿದ್ದು ಕುಟುಂಬ ಕಲ್ಯಾಣ ಕಾರ್ಯಕ್ರಮಕ್ಕೆ ಉತ್ತೇಜನ ನೀಡಲಾಗುತ್ತಿದೆ.

## ನೀರು ಪೂರೈಕೆ ಹಾಗೂ ಶೌಚಾಲಯ ಒದಗಿಸುವಿಕೆ

ಕೆಲವು ಗ್ರಾಮಾಂತರ ಆಸ್ಪತ್ರೆಗಳಲ್ಲಿ ನೀರಿನ ಸೌಕರ್ಯ ಹಾಗೂ ಶೌಚಾಲಯಗಳು ಇಲ್ಲದೆ ಇರುವುದನ್ನು ಪರಿಗಣಿಸಿ ಎಲ್ಲಾ ಆಸ್ಪತ್ರೆಗಳಿಗೂ ನೀರಿನ ಸೌಲಭ್ಯ ಹಾಗೂ ಶೌಚಾಲಯ ನಿರ್ಮಿಸಲು ತೀರ್ಮಾನಿಸಿ ಹಂತ ಹಂತವಾಗಿ ಪೂರೈಸಲಾಗುತ್ತಿದೆ.

Water Supply

## 5. ನೀರು ಪೂರೈಕೆ

ಗ್ರಾಮಾಂತರ ಜನರಿಗೆ ಶುದ್ಧ ಕುಡಿಯುವ ನೀರು ಪೂರೈಕೆ ಮಾಡುವುದು ಜಿಲ್ಲಾ ಪರಿಷತ್ತಿನ ಒಂದು ಪ್ರಮುಖವಾದ ಕಾರ್ಯವಾಗಿದೆ. 1989–90ನೇ ಸಾಲಿಗೆ 287·50 ಲಕ್ಷಗಳನ್ನು ಯೋಜನೆಯಲ್ಲಿಯೂ, 7·35 ಲಕ್ಷ ರೂ. ಗಳನ್ನು ಯೋಜನೇತರದಲ್ಲೂ ನೀಡಲಾಗಿದೆ. ನೀರು ಪೂರೈಕೆಯ ಯೋಜನೆಯಡಿಯಲ್ಲಿ ತ್ವರಿತ ಗ್ರಾಮಾಂತರ ನೀರು ಪೂರೈಕೆ, ಕಿರು ನೀರು ಸರಬರಾಜು ಮತ್ತು ಕೊಳವೆ ಬಾವಿಗಳನ್ನು ತೋಡಿ ಕೈಪಂಪುಗಳನ್ನು ಅಳವಡಿಸುವುದು ಅಲ್ಲದೇ ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿಯೂ ಸಹ ನೀರು ಸರಬರಾಜು ಯೋಜನೆಗಳನ್ನು ಕೈಗೊಳ್ಳಲಾಗಿದೆ.

ಒಟ್ಟು ಗ್ರಾಮಾಂತರ ನೀರು ಪೂರೈಕೆ ಯೋಜನೆಯಡಿಯಲ್ಲಿ 261·673 ಲಕ್ಷ ರೂ. ಗಳನ್ನು ಯೋಜನೇತರದಡಿಯಲ್ಲಿ 6·423 ಲಕ್ಷ ರೂ. ಗಳನ್ನು ವಿನಿಯೋಗಿಸಲಾಗಿದೆ. ಪ್ರಸಕ್ತ ಸಾಲಿನಲ್ಲಿ ಕೊಳವೆ ನೀರು ಪೂರೈಕೆ ಯೋಜನೆಯಡಿಯಲ್ಲಿ 100 ಯೋಜನೆ ಗುರಿಯಿದ್ದು 91 ಯೋಜನೆಗಳನ್ನು ಪೂರ್ಣಗೊಳಿಸಲಾಗಿದೆ. ಹಾಗೆಯೆ ಕಿರುನೀರು ಸರಬರಾಜು ಯೋಜನೆಯಲ್ಲಿ 76 ಗುರಿಯಿದ್ದು, ಒಟ್ಟು 40 ಯೋಜನೆಗಳನ್ನು ಪೂರ್ಣಗೊಳಿಸಲಾಗಿದೆ. ಯೋಜನೆಯು ಪ್ರಾರಂಭದಿಂದ ಮಾರ್ಚ್ 90ರ ಅಂತ್ಯದವರೆಗೆ 9011 ಕೊಳವೆ ಬಾವಿಗಳನ್ನು ತೋಡಿದ್ದು ಅವುಗಳಿಗೆ ಕೈಪಂಪು ಅಳವಡಿಸಲಾಗಿದೆ.

## 6. ಸಣ್ಣ ನೀರಾವರಿ

1) 1989-90ನೇ ಸಾಲಿನಲ್ಲಿ ಸಣ್ಣ ನೀರಾವರಿಯ ಕೆಲಸದಲ್ಲಿ 10 ಹೊಸ ಕೆರೆಗಳ ಕಾರ್ಯ ಕೈಗೊಂಡಿದ್ದು ಕೆರೆಗಳ ದುರಸ್ತಿ ಕೆಲಸವು ಸೇರಿ 35·94 ಲಕ್ಷ ರೂ. ಗಳು ಖರ್ಚಾಗಿರುತ್ತದೆ. ಜಿಲ್ಲೆಯಲ್ಲಿ 667 ಕೆರೆಗಳು ಜಿಲ್ಲಾ ಪರಿಷತ್ ವ್ಯಾಪ್ತಿಗೆ ಒಳಪಟ್ಟು 14106·98 ಹೆಕ್ಟೇರ್ ಪ್ರದೇಶವು ನೀರಾವರಿಗೆ ಒಳಪಟ್ಟಿರುತ್ತದೆ.

2) ಸಣ್ಣ ನೀರಾವರಿ ಯೋಜನೆಗಳ ನಿರ್ಮಾಣ ಹಾಗೂ ನಿರ್ವಹಣೆಗೆ 1989–90ರಲ್ಲಿ 22·70 ಲಕ್ಷ ರೂ. ಗಳನ್ನು ಯೋಜನೆಯಲ್ಲೂ ಹಾಗೂ 26·33 ಲಕ್ಷ ರೂ.ಗಳನ್ನು ಯೋಜನೇತರದಲ್ಲಿಯೂ ನೀಡಲಾಗಿತ್ತು.

Women and Children Welfare

## 7. ಮಹಿಳೆಯರು ಮತ್ತು ಮಕ್ಕಳ ಕಲ್ಯಾಣ

1989–90ನೇ ಸಾಲಿಗೆ ಈ ಇಲಾಖೆಗೆ ಒಟ್ಟು 163·54 ಲಕ್ಷ ರೂ.ಗಳನ್ನು ಯೋಜನೆಯಲ್ಲಿ ಮತ್ತು ಈ 122·03 ಲಕ್ಷ ರೂ.ಗಳನ್ನು ಯೋಜನೇತರದಲ್ಲಿ ಒದಗಿಸಲಾಗಿತ್ತು. ಅದರಲ್ಲಿ 150·57 ಲಕ್ಷ ರೂ.ಗಳನ್ನು ಯೋಜನೆಯಲ್ಲಿ ಮತ್ತು 104·21 ಲಕ್ಷ ರೂ.ಗಳನ್ನು ಯೋಜನೇತರದಲ್ಲಿ ಈ ಕೆಳಕಂಡ ಕಾರ್ಯಕ್ರಮಗಳಿಗೆ ಖರ್ಚು ಮಾಡಲಾಗಿದೆ.

ಮೈಸೂರು ಜಿಲ್ಲೆಯಲ್ಲಿ ಕೇಂದ್ರ ಪುರಸ್ಕೃತದ 7 ಬಾಲ ವಿಕಾಸ ಯೋಜನೆಗಳು ಈ ಕೆಳಗೆ ನಮೂದಿಸಿರುವ ತಾಲ್ಲೂಕುಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ.

1) ಟಿ. ನರಸೀಪುರ
2) ಕೊಳ್ಳೇಗಾಲ
3) ಹುಣಸೂರು
4) ಹೆಚ್. ಡಿ. ಕೋಟೆ
5) ಮೈಸೂರು
6) ಗುಂಡ್ಲುಪೇಟೆ ಮತ್ತು
7) ಯಳಂದೂರು.

ಈ ಯೋಜನೆಯನ್ವಯ ಫಲಾನುಭವಿಗಳಿಗೆ ಈ ಕೆಳಕಂಡ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ :

1) ಪೂರಕ ಪೌಷ್ಠಿಕ ಆಹಾರ
2) ರೋಗ ನಿರೋಧಕ ಚುಚ್ಚುಮದ್ದು

3) ಆರೋಗ್ಯ ತಪಾಸಣೆ

4) ಮಾಹಿತಿ ಸೇವೆ

5) ರೂಢಿಗತವಲ್ಲದ ಶಾಲಾ ಪೂರ್ವ ಶಿಕ್ಷಣ

6) ಆರೋಗ್ಯ ಮತ್ತು ಪೌಷ್ಠಿಕಾಂಶದ ಬಗ್ಗೆ ತಾಯಂದಿರಿಗೆ ಶಿಕ್ಷಣ

ಈ ಮೇಲ್ಕಂಡ ಯೋಜನೆಗಳ ಆಡಳಿತಾತ್ಮಕ ವೆಚ್ಚಕ್ಕಾಗಿ 1989-90ನೇ ಸಾಲಿನಲ್ಲಿ ಒಟ್ಟು 98·18 ಲಕ್ಷ ರೂ. ಗಳನ್ನು ಯೋಜನೆಯಲ್ಲಿ ಒದಗಿಸಲಾಗಿತ್ತು. ಅದರಲ್ಲಿ ಒಟ್ಟು 91·54 ಲಕ್ಷ ರೂ. ಗಳನ್ನು ಮಾತ್ರ ಖರ್ಚು ಮಾಡಲಾಗಿದೆ. ಕೇಂದ್ರ ಸರ್ಕಾರದ ಪಾಲಿನ ಪೂರ್ತಿ ಹಣ ಬಿಡುಗಡೆಯಾಗಿಲ್ಲದ್ದ ಕಾರಣ ಜಿಲ್ಲಾ ಪರಿಷತ್ತಿನಿಂದ ಪೂರ್ತಿ ಬಿಡುಗಡೆಯಾಗಿಲ್ಲ.

ಯೋಜನೇತರದಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ 16·55 ಲಕ್ಷ ರೂ. ಗಳನ್ನು ಒದಗಿಸಲಾಗಿತ್ತು. ಅದರಲ್ಲಿ 15·62 ಲಕ್ಷ ರೂ. ಗಳನ್ನು ಸಹಾಯಕ ನಿರ್ದೇಶಕರ ಕಛೇರಿ ಹಾಗೂ ಮುಖ್ಯ ಸೇವಿಕಾ, ಗ್ರಾಮ ಸೇವಿಕಗಳ ವೇತನ ಭತ್ಯೆಗಾಗಿ ಖರ್ಚು ಮಾಡಲಾಗಿದೆ.

## ನಿರಾಧಾರ ಅನಾಥ ಮಕ್ಕಳ ರಕ್ಷಣೆ ಮತ್ತು ಪೋಷಣೆ

ಮೈಸೂರು ಜಿಲ್ಲೆಯ ಕೊಳ್ಳೇಗಾಲ, ನಂಜನಗೂಡು, ಕೆ. ಆರ್. ನಗರ ಮತ್ತು ಮೈಸೂರು ನಗರದಲ್ಲಿ ಒಟ್ಟು 19 ಕುಠೀರಗಳನ್ನು ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿವೆ. ಇವುಗಳಲ್ಲಿ ರಾಜ್ಯ ಪುರಸ್ಕೃತದ 7 ಕುಠೀರಗಳಿಗೆ 2 ಲಕ್ಷ ರೂ. ಗಳು ಹಾಗೂ ಕೇಂದ್ರ ಮತ್ತು ರಾಜ್ಯ ಪುರಸ್ಕೃತದ 12 ಕುಠೀರಗಳಿಗೆ 6 ಲಕ್ಷ ರೂ. ಗಳಂತೆ ಒಟ್ಟು 8 ಲಕ್ಷ ರೂ. ಗಳನ್ನು ಒದಗಿಸಲಾಗಿತ್ತು. ಅದರಲ್ಲಿ ಒಟ್ಟು 7.29 ಲಕ್ಷ ರೂ. ಗಳನ್ನು ನಿರ್ಗತಿಕ ಮಕ್ಕಳ ಊಟ, ವಸತಿ, ವಿದ್ಯಾಭ್ಯಾಸ ಹಾಗೂ ನಿರ್ವಹಣೆಗಾಗಿ ಸ್ವಯಂ ಸೇವಾ ಸಂಸ್ಥೆಗಳಿಗೆ ಅನುದಾನದ ರೂಪದಲ್ಲಿ ಮಂಜೂರು ಮಾಡಲಾಗಿದೆ.

## ಉದ್ಯೋಗ ಮಾತೆಯರ ಶಿಶು ಶಾಲೆಗಳಿಗೆ ಸಹಾಯಧನ

ಮೈಸೂರು ಜಿಲ್ಲೆಯಲ್ಲಿ 5 ಶಿಶು ಪಾಲನಾ ಕೇಂದ್ರಗಳನ್ನು ಸ್ವಯಂ ಸೇವಾ ಸಂಸ್ಥೆಗಳು ನಡೆಸುತ್ತಿವೆ. ಇವು ನಂಜನಗೂಡು ತಾಲ್ಲೂಕಿನಲ್ಲಿ 2, ಕೊಳ್ಳೇಗಾಲದಲ್ಲಿ 2 ಮತ್ತು ಮೈಸೂರು (ನ)ದಲ್ಲಿ 1 ಕಾರ್ಯನಿರ್ವಹಿಸುತ್ತಿವೆ. ಈ ಶಿಶುಪಾಲನಾ ಕೇಂದ್ರಗಳ ಒಟ್ಟು ಫಲಾನುಭವಿಗಳ ಸಂಖ್ಯೆ 125. 1989-90ನೇ ಸಾಲಿನ ಆಯವ್ಯಯದಲ್ಲಿ 0·77 ಲಕ್ಷ ರೂ. ಗಳನ್ನು ಒದಗಿಸಲಾಗಿತ್ತು. ಅದರಲ್ಲಿ ಒಟ್ಟು 0·65 ಲಕ್ಷ ರೂ. ಗಳನ್ನು ಸದರಿ 5-ಶಿಶುಪಾಲನಾ ಕೇಂದ್ರಗಳಿಗೆ ಮಂಜೂರು ಮಾಡಲಾಗಿದೆ. ಉಳಿಕೆ ಆಯವ್ಯಯವನ್ನು ಜಿಲ್ಲಾ ಪರಿಷತ್ತಿಗೆ ಒಪ್ಪಿಸಲಾಗಿದೆ.

## ತಾಲ್ಲೂಕು ಮಟ್ಟದ ಮಹಿಳಾ ಒಕ್ಕೂಟಗಳು

ಈ ಯೋಜನೆಯಡಿಯಲ್ಲಿ ಒಟ್ಟು 50 ಸಾವಿರ ರೂ. ಗಳನ್ನು ಒದಗಿಸಲಾಗಿತ್ತು. ಅದರಲ್ಲಿ ನಂಜನಗೂಡು ತಾಲ್ಲೂಕಿನ ಒಕ್ಕೂಟಕ್ಕೆ 7,500·00 ರೂ. ಮಂಜೂರು ಮಾಡಲಾಗಿದೆ. ಇತರ ತಾಲ್ಲೂಕುಗಳಿಂದ ಪ್ರಸ್ತಾವನೆ ಬಾರದ ಕಾರಣ ಪೂರ್ತಿ ಹಣ ಖರ್ಚಾಗಿರುವುದಿಲ್ಲ. ಉಳಿಕೆ ಆಯವ್ಯಯವನ್ನು ಜಿಲ್ಲಾ ಪರಿಷತ್ತಿಗೆ ಒಪ್ಪಿಸಲಾಗಿದೆ.

## ವಿಧವೆಯರ ಮತ್ತು ದೇವದಾಸಿಯರ ಮರು ವಿವಾಹ

ಈ ಯೋಜನೆಯಡಿ 9,000-00 ರೂ. ಗಳನ್ನು ಆಯವ್ಯಯದಲ್ಲಿ ಒದಗಿಸಲಾಗಿತ್ತು. ಸದರಿ ಹಣವನ್ನು ಯೋಜನೆಯನ್ವಯ 3 ಜೊತೆ ಮರು ವಿವಾಹಗಳಿಗೆ ಖರ್ಚು ಮಾಡಬೇಕಿತ್ತು. ಆದರೆ ಅರ್ಹ ಜೋಡಿಗಳಿಂದ ಪ್ರಸ್ತಾವನೆ ಬಾರದ ಕಾರಣ ಖರ್ಚು ಆಗಿರುವುದಿಲ್ಲ. ಆದುದರಿಂದ ಜಿಲ್ಲಾ ಪರಿಷತ್‌ಗೆ ಒಪ್ಪಿಸಲಾಗಿದೆ.

## ಅಂಗನವಾಡಿ ಕಟ್ಟಡಗಳ ನಿರ್ಮಾಣ

ಈ ಕಾರ್ಯಕ್ರಮಕ್ಕೆ 3·00 ಲಕ್ಷ ರೂ.ಗಳನ್ನು ಒದಗಿಸಲಾಗಿತ್ತು. ಸರ್ಕಾರದ ಆದೇಶದಂತೆ ಸಮುದಾಯದವರು ಅಂಗನವಾಡಿ ಕಟ್ಟಡಗಳನ್ನು ಕಟ್ಟಲು ಮುಂದೆ ಬಂದಲ್ಲಿ ಒಂದು ಕಟ್ಟಡಕ್ಕೆ ಇಲಾಖೆಯು 3,000 ರೂ.ಗಳನ್ನು ಸಹಾಯ ಅನುದಾನದ ರೂಪದಲ್ಲಿ ಕೊಡುವ ಅವಕಾಶವಿದೆ. ಮಂಡಲ ಪ್ರಧಾನರು, ಗ್ರಾಮಸ್ಥರು ಈ ಹಣ ಬಹಳ ಕಡಿಮೆ ಎಂಬ ಕಾರಣಕ್ಕಾಗಿ ಈ ಯೋಜನೆಯ ಪ್ರಯೋಜನವನ್ನು ಪಡೆಮಕೊಳ್ಳಲು ಮುಂದೆ ಬಾರದ ಕಾರಣ ಖರ್ಚು ಮಾಡಲಾಗಲಿಲ್ಲ. ಆಯವ್ಯಯವನ್ನು ಜಿಲ್ಲಾ ಪರಿಷತ್‌ಗೆ ಒಪ್ಪಿಸಲಾಗಿದೆ.

## ವಿಶೇಷ ಪೌಷ್ಠಿಕ ಆಹಾರ

ಈ ಯೋಜನೆಯಡಿಯಲ್ಲಿ ಶಾಲಾ ಪೂರ್ವ ಮಕ್ಕಳಿಗೆ ಊಟದ ಯೋಜನೆಯಡಿ ಆರು ವರ್ಷದೊಳಗಿನ ಮಕ್ಕಳಿಗೆ ಗರ್ಭಿಣಿ ಮತ್ತು ಬಾಣಂತಿಯರಿಗೆ 1187 ಅಂಗನವಾಡಿ ಕೇಂದ್ರಗಳ ಮೂಲಕ ಒಟ್ಟು 87,900 ಫಲಾನುಭವಿಗಳಿಗೆ ವಿಶೇಷ ಪೌಷ್ಠಿಕ ಆಹಾರ ವಿತರಣೆಗಾಗಿ ಲೆಕ್ಕ ಶೀರ್ಷಿಕೆ 2236ರ ಯೋಜನೆಯಲ್ಲಿ 54 ಲಕ್ಷ ರೂ·ಗಳನ್ನು ಮತ್ತು ಯೋಜನೇತರದಲ್ಲಿ 74 ಲಕ್ಷ ರೂ. ಗಳನ್ನು ಒಟ್ಟು 128 ಲಕ್ಷ ರೂ. ಗಳನ್ನು ಒದಗಿಸಲಾಗಿತ್ತು. ಅವರಲ್ಲಿ ಒಟ್ಟು 112·32 ಲಕ್ಷ ರೂ. ಗಳನ್ನು ಸರಾಸರಿ 83,597 ಫಲಾನುಭವಿಗಳಿಗೆ 1,177 ಅಂಗನವಾಡಿ ಕೇಂದ್ರಗಳ ಮೂಲಕ ಮತ್ತು ಬಾಲ ವಿಕಾಸ ಯೋಜನೆಗಳಿಲ್ಲದಿರುವ ಪಟ್ಟಣಗಳು ಹಾಗೂ ಕೊಳಚೆ ಪ್ರದೇಶಗಳಲ್ಲಿ ವಾಸಿಸುವ 17,403 ಫಲಾನುಭವಿಗಳಿಗೆ 119 ವಿಶೇಷ ಪೌಷ್ಠಿಕ ಆಹಾರ ಕೇಂದ್ರಗಳ ಮೂಲಕ ಖರ್ಚು ಮಾಡಲಾಗಿದೆ.

## ತರಬೇತಿಗಾಗಿ ಮಹಿಳೆಯರಿಗೆ ಸಹಾಯಾನುದಾನ

ಈ ಯೋಜನೆಯನ್ವಯ ವಾರ್ಷಿಕ ವರಮಾನ ರೂ. 4,800·00 ಗಳಿಗಿಂತ ಕಡಿಮೆ ಇದ್ದು 18 ರಿಂದ 45 ವರ್ಷದೊಳಗಿನ 7ನೇ ತರಗತಿ ತೇರ್ಗಡೆಯಾದ ಅರ್ಹ ಮಹಿಳೆಯರಿಗೆ ಗೃಹ ಕೈಗಾರಿಕೆಗಳಲ್ಲಿ ತರಬೇತಿ ಪಡೆಯಲು ಸಹಾಯಧನ ಮಂಜೂರು ಮಾಡಲಾಗುವುದು. 89–90ರಲ್ಲಿ ಯೋಜನೇತರದಲ್ಲಿ 4,000·00 ರೂ. ಗಳನ್ನು ಒದಗಿಸಿದ್ದು 850·00 ರೂ. ಗಳನ್ನು 3 ಫಲಾನುಭವಿಗಳಿಗೆ ಖರ್ಚು ಮಾಡಲಾಗಿದೆ.

## ಹೆರಿಗೆ ಭತ್ಯೆ

ಭೂರಹಿತ ಕೃಷಿಕ ಮಹಿಳೆಯರಿಗೆ ಹೆರಿಗೆ ನಂತರ ತಲಾ ರೂ. 3,00.00 ಗಳನ್ನು ಈ ಯೋಜನೆಯಡಿ ಆರೋಗ್ಯ ಇಲಾಖೆಯ ವೈದ್ಯಾಧಿಕಾರಿಗಳ ಮೂಲಕ ಮಂಜೂರು ಮಾಡಲಾಗುತ್ತದೆ. 1989–90ನೇ ಸಾಲಿನಲ್ಲಿ ಯೋಜನೇತರದಲ್ಲಿ 31·42 ಲಕ್ಷ ರೂ. ಗಳನ್ನು ಒದಗಿಸಲಾಗಿತ್ತು. ಅದರಲ್ಲಿ 8,591 ಫಲಾನುಭವಿಗಳಿಗೆ 27·29 ಲಕ್ಷರೂ. ಗಳನ್ನು ಮಂಜೂರು ಮಾಡಲಾಗಿದೆ.

Community Welfare Dept / [illegible]

# 8. ಸಮಾಜ ಕಲ್ಯಾಣ ಇಲಾಖೆ

ಸಮಾಜ ಕಲ್ಯಾಣ ಇಲಾಖೆಯಲ್ಲಿ ಮುಖ್ಯವಾಗಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗಾಗಿ ವಿದ್ಯಾರ್ಥಿ ನಿಲಯಗಳ ಸೌಕರ್ಯ ಒದಗಿಸುವುದು, ವಿದ್ಯಾರ್ಥಿ ವೇತನ ನೀಡುವುದು, ವಿದ್ಯಾರ್ಥಿಗಳಿಗೆ ಉಚಿತವಾಗಿ ಸಮವಸ್ತ್ರ ಮತ್ತು ಲೇಖನ ಸಾಮಗ್ರಿ ಸರಬರಾಜು ಮಾಡುವುದು, ಪರಿಶಿಷ್ಟ ಜಾತಿ, ಪರಿಶಿಷ್ಟ ವಿದ್ಯಾರ್ಥಿಗಳಿಗೆ ಭೋಜನ ನಿಮಿತ್ತ ಹೆಚ್ಚುವರಿ ಹಣ ನೀಡುವುದು, ಮತ್ತು ಗ್ರಾಮೀಣ ಪ್ರದೇಶದ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ 3 ರಿಂದ 5 ವರ್ಷದ ಮಕ್ಕಳಿಗೆ ಮಹಿಳಾ ಕಲ್ಯಾಣ ಕೇಂದ್ರಗಳನ್ನು ನಡೆಸುವುದು, ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ಗ್ರಾಮದ ಮಹಿಳೆಯರಿಗೆ ಸ್ವಯಂ ಉದ್ಯೋಗ ಕಲ್ಪಿಸಲು ಹೊಲಿಗೆ ತರಬೇತಿ ಮತ್ತು ತೆಂಗಿನ ನಾರಿನ ಕೇಂದ್ರಗಳನ್ನು ನಡೆಸುವುದು. ಮತ್ತು ವಿದ್ಯಾವಂತ ನಿರುದ್ಯೋಗಿಗಳಿಗೆ ಸ್ವಯಂ ಉದ್ಯೋಗ ಹೊಂದಲು ಅನು

ಕೂಲವಾಗುವಂತೆ ಬೆರಳಚ್ಚು ಮತ್ತು ಶೀಘ್ರಲಿಪಿ ಹಾಗೂ ವಾಹನ ಚಾಲನಾ ತರಬೇತಿ ನೀಡುವುದು ಮುಂತಾದ ಕಲ್ಯಾಣ ಕಾರ್ಯಕ್ರಮಗಳನ್ನು ಇಲಾಖೆ ಹಮ್ಮಿ ಕೊಂಡಿದ್ದು ಈ ಕಾರ್ಯಕ್ರಮದ ಅನುಷ್ಠಾನಕ್ಕಾಗಿ 89–90ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಈ ಕೆಳಕಂಡಂತೆ ಹಣವನ್ನು ವಿನಿಯೋಗ ಮಾಡಲಾಗಿದೆ.

1) ಜಿಲ್ಲೆಯಲ್ಲಿ ಒಟ್ಟು 53 ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು, 11 ಅನುದಾನಿತ ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ಹಾಗೂ 6 ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳು ಇದ್ದು, ಈ ವಿದ್ಯಾರ್ಥಿಗಳಿಗೆ ಉಚಿತ ಊಟ, ವಸತಿ, ಸಮವಸ್ತ್ರ, ಹಾಸಿಗೆ ಹೊದಿಕೆ, ಲೇಖನಸಾಮಗ್ರಿಗಳ ಸೌಲಭ್ಯ ಒದಗಿಸಿ ವಿದ್ಯಾಭ್ಯಾಸಕ್ಕಾಗಿ ಪ್ರೋತ್ಸಾಹ ನೀಡಲಾಗು ತ್ತಿದ್ದು, 1989-90ನೇ ಸಾಲಿನಲ್ಲಿ 79·68 ಲಕ್ಷ ರೂ. ಗಳನ್ನು ಖರ್ಚು ಮಾಡಿ 4,585 ವಿದ್ಯಾರ್ಥಿ ಗಳಿಗೆ ಸೌಲಭ್ಯ ಒದಗಿಸಲಾಗಿದೆ.

2) ಜಿಲ್ಲೆಯಲ್ಲಿ ಮಾಧ್ಯಮಿಕ ಶಾಲೆ ಹಂತದಿಂದ ಕಾಲೇಜು ಹಂತದವರೆಗೆ ಓದುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ಮೆಟ್ರಿಕ್‌ಪೂರ್ವ ನಂತರದ ವಿದ್ಯಾರ್ಥಿ ವೇತನ ಸೌಲಭ್ಯ ನೀಡಿಕೆಗಾಗಿ 91·92 ಲಕ್ಷ ರೂ. ಗಳನ್ನು ಖರ್ಚು ಮಾಡಿ ಒಟ್ಟು 42,270 ವಿದ್ಯಾರ್ಥಿಗಳಿಗೆ ಸೌಲಭ್ಯ ಒದಗಿಸ ಲಾಗಿದೆ.

3) ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿರುವ ಪರಿಶಿಷ್ಟ ಜಾತಿಯ ಮಕ್ಕಳಿಗಾಗಿ 85 ಮಹಿಳಾ ಮತ್ತು ಮಕ್ಕಳ ಕಲ್ಯಾಣ ಕೇಂದ್ರಗಳಿದ್ದು ಈ ಕೇಂದ್ರದಲ್ಲಿ ರುವ ಮಕ್ಕಳಿಗೆ ಮಧ್ಯಾಹ್ನದ ಉಪಹಾರ ಮತ್ತು ಉಚಿತ ಸಮವಸ್ತ್ರ ಸರಬರಾಜಿಗಾಗಿ 39·95 ಲಕ್ಷ ರೂ. ಖರ್ಚು ಮಾಡಿ 4,250 ಮಕ್ಕಳಿಗೆ ಸೌಲಭ್ಯ ಒದಗಿಸಲಾಗಿದೆ.

4) ಪರಿಶಿಷ್ಟ ಜಾತಿಯವರಿಗಾಗಿ ಜಿಲ್ಲೆಯಲ್ಲಿ 3 ಆಶ್ರಮ ಶಾಲೆಗಳಿದ್ದು. ಈ ಶಾಲೆಗಳಲ್ಲಿ 1 ರಿಂದ 4ನೇ ತರಗತಿ ಯವರೆಗೆ ಸೌಲಭ್ಯ ನೀಡುತ್ತಿದ್ದು, ಈ ಯೋಜನೆಗೆ 4·86 ಲಕ್ಷ ರೂ. ಗಳನ್ನು ಖರ್ಚು ಮಾಡಿ 225 ವಿದ್ಯಾರ್ಥಿಗಳಿಗೆ ಸೌಲಭ್ಯ ಒದಗಿಸಲಾಗಿದೆ.

5) ಜಿಲ್ಲೆಯಲ್ಲಿ 5 ಹೊಲಿಗೆ ತರಬೇತಿ ಕೇಂದ್ರಗಳು, 1 ಹೊಲಿಗೆ ಉತ್ಪಾದನಾ ಘಟಕ ಮತ್ತು 1 ತೆಂಗಿನ ನಾರು ತರಬೇತಿ ಕೇಂದ್ರವಿದ್ದು, ಈ ಕೇಂದ್ರಗಳಲ್ಲಿ ಗ್ರಾಮಾಂತರ ನಿರುದ್ಯೋಗಿ ಮಹಿಳೆಯರಿಗೆ ಉದ್ಯೋಗ ಹೊಂದಲು ಅನುಕೂಲವಾಗುವಂತೆ 12 ತಿಂಗಳುಗಳ ಕಾಲ ಹೊಲಿಗೆ ತರಬೇತಿ ನೀಡಿ ತರಬೇತಿ ಅಂತ್ಯದಲ್ಲಿ ತೇರ್ಗಡೆಯಾದ ಮಹಿಳೆಯರಿಗೆ ಒಂದು ಹೊಲಿಗೆ ಯಂತ್ರವನ್ನು ಉಚಿತವಾಗಿ ಸರಬರಾಜು ಮಾಡಲಾಗುತ್ತಿದ್ದು 1989–90ನೇ ಸಾಲಿನಲ್ಲಿ 95 ಮಹಿಳೆಯರಿಗೆ ಹೊಲಿಗೆ ಯಂತ್ರಗಳನ್ನು ಸರಬರಾಜು ಮಾಡಿದ್ದು, 22 ಮಹಿಳೆಯರಿಗೆ ತೆಂಗಿನನಾರು ತರಬೇತಿ ನೀಡಲಾಗಿದೆ. ಈ ಯೋಜನೆಗಾಗಿ 10·12 ಲಕ್ಷ ರೂ. ಗಳನ್ನು ಖರ್ಚು ಮಾಡಲಾಗಿದೆ.

6) ಪರಿಶಿಷ್ಟಜಾತಿ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಭೋಜನ ನಿಮಿತ್ತ ವೆಚ್ಚವನ್ನು ಸಂದಾಯ ಮಾಡಲು 6·43 ಲಕ್ಷ ರೂ. ಗಳನ್ನು ಖರ್ಚು ಮಾಡಿ 1,287 ವಿದ್ಯಾರ್ಥಿಗಳಿಗೆ ಸೌಲಭ್ಯ ಕಲ್ಪಿಸಲಾಗಿದೆ.

7) ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗದ ನಿರುದ್ಯೋಗ ವಿದ್ಯಾವಂತ ಯುವಕರಿಗೆ ಸ್ವಯಂ ಉದ್ಯೋಗ ಹೊಂದಲು ಅವಕಾಶ ಕಲ್ಪಿಸಲು ಬೆರಳಚ್ಚು, ಶೀಘ್ರ ಲಿಪಿ ಮತ್ತು ವಾಹನ ಚಾಲನೆಯಲ್ಲಿ ತರಬೇತಿ ನೀಡ ಲಾಗುತ್ತಿದ್ದು 0·40 ಲಕ್ಷ ರೂ. ಗಳನ್ನು ಖರ್ಚು ಮಾಡಿ 45 ವಿದ್ಯಾರ್ಥಿಗಳಿಗೆ ಸೌಲಭ್ಯ ಕಲ್ಪಿಸ ಲಾಗಿದೆ.

8) ಪರಿಶಿಷ್ಟ ಜಾತಿ–ಪರಿಶಿಷ್ಟ ವರ್ಗದ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸದಲ್ಲಿ ಪ್ರೋತ್ಸಾಹ ನೀಡಲು ಎಸ್.ಎಸ್. ಎಲ್.ಸಿ. ಮತ್ತು ಮೆಟ್ರಿಕ್ ನಂತರದ ಪರೀಕ್ಷೆಗಳಲ್ಲಿ ಪ್ರಥಮ ಪ್ರಯತ್ನದಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆಯಾದ ವಿದ್ಯಾರ್ಥಿಗಳಿಗೆ ರೂ. 500–00 ರಿಂದ 1500–00 ಗಳವರೆಗೆ ನಗದು ಬಹುಮಾನ ನೀಡಲಾಗುತ್ತಿದ್ದು 89–90ನೇ ಸಾಲಿನಲ್ಲಿ 1·78 ಲಕ್ಷ ರೂ. ಖರ್ಚು ಮಾಡಿ 246 ವಿದ್ಯಾರ್ಥಿಗಳಿಗೆ ಪ್ರೋತ್ಸಾಹಧನ ನೀಡಲಾಗಿದೆ.

9) ಸಮಾಜದಲ್ಲಿರುವ ಅಸ್ಪೃಶ್ಯತೆಯ ಪಿಡುಗನ್ನು ತೊಡೆದುಹಾಕಲು ಅಂತರಜಾತಿಯ ವಿವಾಹಗಳಿಗೆ ಪ್ರೋತ್ಸಾಹ ನೀಡುವ ಮುಖಾಂತರ ಇಲಾಖೆಯು ಶ್ರಮಿಸುತ್ತಿದ್ದು ಅಂತರ ಜಾತಿಯ ವಿವಾಹವಾದ ಪ್ರತಿ ದಂಪತಿಗಳಿಗೆ 5,000-00 ರೂ. ಗಳ ಪ್ರೋತ್ಸಾಹ ಧನ ನೀಡುತ್ತಿದ್ದು, 89-90 ನೇ ಸಾಲಿನಲ್ಲಿ 27,000-00 ರೂ. ಗಳನ್ನು ಖರ್ಚು ಮಾಡಿ 6 ದಂಪತಿಗಳಿಗೆ ಪ್ರೋತ್ಸಾಹಧನ ಮಂಜೂರು ಮಾಡಲಾಗಿದೆ.

1989-90ನೇ ಸಾಲಿನಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದ ಅಭಿವೃದ್ಧಿಗಾಗಿ ಸಮಾಜ ಕಲ್ಯಾಣ ಇಲಾಖೆಯು ಈ ಮೇಲ್ಕಂಡ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು 1989-90ನೇ ಸಾಲಿನಲ್ಲಿ ಈ ಎಲ್ಲಾ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಯೋಜನೆಯಲ್ಲಿ 52·16 ಲಕ್ಷ ರೂ. ಗಳನ್ನು ಮತ್ತು ಯೋಜನೇತರದಲ್ಲಿ 219·95 ಲಕ್ಷ ರೂ. ಗಳನ್ನು ಖರ್ಚು ಮಾಡಲಾಗಿದೆ.

## 9. ಗಿರಿಜನ ಉಪಯೋಜನೆ

ಮೈಸೂರು ಜಿಲ್ಲೆಯ 9 ತಾಲ್ಲೂಕುಗಳಲ್ಲಿ 351 ಗಿರಿಜನ ವಸಾಹತುಗಳಿದ್ದು ಸುಮಾರು 7950 ಗಿರಿಜನ ಕುಟುಂಬಗಳಿವೆ. ಈ ಎಲ್ಲಾ ಕುಟುಂಬಗಳಿಗೆ ಏಕ ಕಾಲದಲ್ಲಿ ಅವರಿಗೆ ಬೇಕಾದ ಸೌಲಭ್ಯ ನೀಡಲು ಸಾಧ್ಯವಿಲ್ಲವಾದ ಕಾರಣ 3 ವರ್ಷಗಳ ಅವಧಿಯಲ್ಲಿ ಜಿಲ್ಲೆಯ ಎಲ್ಲಾ ಗಿರಿಜನ ಕುಟುಂಬಗಳಿಗೆ ಬೇಕಾದ ಮೂಲ ಸವಲತ್ತುಗಳನ್ನು ಒದಗಿಸುವ ಯೋಜನೆಯನ್ನು ಹಾಕಿಕೊಳ್ಳಲಾಗಿದೆ.

ಈ ರೀತಿಯ ಯೋಜನೆಯನ್ವಯ ಪ್ರಥಮವಾಗಿ 1987-88ನೇ ಸಾಲಿಗೆ 94 ವಸಾಹತುಗಳನ್ನು ಆಯ್ಕೆ ಮಾಡಿ ಅವುಗಳ ಸಮೀಕ್ಷೆ ನಡೆಸಿ 2074 ಗಿರಿಜನ ಕುಟುಂಬಗಳಿಗೆ ಅವರ ಅವಶ್ಯಕತೆಗನುಗುಣವಾಗಿ ಸವಲತ್ತುಗಳನ್ನು ನೀಡಲಾಯಿತು.

ಇದೇ ರೀತಿ 1988-89ನೇ ಸಾಲಿನಲ್ಲಿ 108 ಗಿರಿಜನ ಕಾಲೋನಿಗಳ ಸಮೀಕ್ಷೆ ನಡೆಸಿ 2,826 ಗಿರಿಜನ ಕುಟುಂಬಗಳಿಗೆ ಅವರ ಅವಶ್ಯಕತೆಗನುಗುಣವಾಗಿ ಬೇಕಾದ ಸವಲತ್ತುಗಳನ್ನು ಒದಗಿಸಲಾಗಿದೆ.

ಈ ಯೋಜನೆಯನ್ವಯ 1989-90ನೇ ಸಾಲಿನಲ್ಲಿ 118 ಗಿರಿಜನ ವಸಾಹತುಗಳನ್ನು ಆಯ್ಕೆ ಮಾಡಿಕೊಂಡು ಸಮೀಕ್ಷೆ ನಡೆಸಿ 2608 ಕುಟುಂಬಗಳಿಗೆ ಅವರ ಅವಶ್ಯಕತೆಗನುಗುಣವಾಗಿ ಬೇಕಾದ ವಿವಿಧ ಇಲಾಖಾ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸಲಾಗಿದೆ. ಸ್ಥಳ ಸಮೀಕ್ಷೆಯ ಪ್ರಕಾರ ಈ 118 ಕಾಲೋನಿಗಳಲ್ಲಿ 1292 ಕುಟುಂಬಗಳು ವಸತಿ ರಹಿತವಾಗಿದ್ದು ಇವರಿಗೆ ಮನೆಗಳನ್ನು ನಿರ್ಮಿಸಲು ಕರ್ನಾಟಕ ಭೂಸೇನಾ ನಿಗಮಕ್ಕೆ ವಹಿಸಲಾಗಿದೆ. ಆ ಪೈಕಿ 580 ಮನೆಗಳನ್ನು ಈಗಾಗಲೇ ಆರಂಭಿಸಿ ಸುಮಾರು 400 ಮನೆಗಳು ಪೂರ್ಣಗೊಂಡಿವೆ. ಉಳಿದ ಮನೆಗಳನ್ನು ತುರ್ತಾಗಿ ಕೈಗೊಂಡು ಪೂರೈಸಲಾಗುವುದು. ಇದಲ್ಲದೇ ಅರಣ್ಯ ಇಲಾಖೆಯ ಮೂಲಕವು 75 ಮನೆಗಳನ್ನು ನಿರ್ಮಿಸಿ ವಸತಿ ಸೌಲಭ್ಯ ಒದಗಿಸಲಾಗಿದೆ.

ಇದಲ್ಲದೇ ಈ ವರ್ಗದ ಗಿರಿಜನರ ಆರ್ಥಿಕ ಅಭಿವೃದ್ಧಿಗಾಗಿ ಕೃಷಿ ಇಲಾಖೆಯ ವತಿಯಿಂದ 508 ಫಲಾನುಭವಿಗಳಿಗೆ ಪಶು ಸಂಗೋಪನೆ ಇಲಾಖೆಯ ವತಿಯಿಂದ 391 ಫಲಾನುಭವಿಗಳಿಗೆ ಸವಲತ್ತುಗಳನ್ನು ಈ ಸಾಲಿನಲ್ಲಿ ನೀಡಲಾಗಿದೆ. ಶೇ. 25 ರಷ್ಟು ಸಾಲದ ಹಣ ಬ್ಯಾಂಕ್‌ನಿಂದ ಸಕಾಲದಲ್ಲಿ ಮಂಜೂರಾತಿ ಆಗದೇ ಇದ್ದದ್ದರಿಂದ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಅಭಿವೃದ್ಧಿ ನಿಗಮದಿಂದ ಅಂಚಿನ ಹಣವನ್ನು ಪಡೆದು ಸಾಲದ ರೂಪದಲ್ಲಿ ಸವಲತ್ತುಗಳನ್ನು ಕೊಂಡುಕೊಳ್ಳಲು ನೀಡಲಾಗುತ್ತಿದೆ. ರೇಷ್ಮೆ ಇಲಾಖೆಯ ವತಿಯಿಂದ 35 ಗಿರಿಜನ ಫಲಾನುಭವಿಗಳಿಗೆ ವಿವಿಧ ಸವಲತ್ತುಗಳನ್ನು ಒದಗಿಸಲಾಗಿದೆ. ಇದಲ್ಲದೆ ತೋಟಗಾರಿಕೆ, ಕೈಗಾರಿಕೆ ಮತ್ತು ಉದ್ಯೋಗ ತರಬೇತಿ ಇಲಾಖೆಗಳ ವತಿಯಿಂದ ತರಬೇತಿ ಕಾರ್ಯಕ್ರಮಗಳನ್ನು ರೂಪಿಸಿ 32 ಗಿರಿಜನರಿಗೆ ತರಬೇತಿ ನೀಡಲಾಗಿದೆ.

ಗಿರಿಜನರಿಗೆ ಆರೋಗ್ಯ ರಕ್ಷಣೆ ಒದಗಿಸುವ ಅಂಗವಾಗಿ ಜಿಲ್ಲೆಯಲ್ಲಿ ಒಟ್ಟು 19 ಆರೋಗ್ಯ ಕೇಂದ್ರಗಳನ್ನು ಇಲಾಖೆಯ ಮೂಲಕ ನಿರ್ವಹಿಸಿ ಆರೋಗ್ಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಲಾಗಿದೆ. ಜಿಲ್ಲೆಯಲ್ಲಿಯ ಗಿರಿಜನರ ಮಕ್ಕಳು ಮತ್ತು ಹೆಂಗಸರುಗಳು ಸಾಮಾನ್ಯವಾಗಿ ದೈಹಿಕವಾಗಿ ಬಲಹೀನರಾಗಿರುವ ಕಾರಣ ಅವರುಗಳಿಗೆ ವಿಶೇಷ ಪೌಷ್ಟಿಕ ಆಹಾರ ಒದಗಿಸಲು ಆದ್ಯತೆಯ ಮೇಲೆ 63 ಕೇಂದ್ರಗಳನ್ನು ಗಿರಿಜನರ ಹಾದಿಗಳಲ್ಲಿಯೇ ಆರಂಭಿಸುವುದರ ಮೂಲಕ ಸವಲತ್ತು ಒದಗಿಸಲಾಗಿದೆ.

ಇದಲ್ಲದೇ ಜಿಲ್ಲೆಯಲ್ಲಿಯ ಎಲ್ಲಾ ಗಿರಿಜನ ಕುಟುಂಬಗಳಿಗೆ ಗುಂಪು ವಿಮೆ ಮಾಡಲು ಉದ್ದೇಶಿಸಿದ್ದು ಈ ಸಾಲಿನಲ್ಲಿ ಪ್ರಥಮವಾಗಿ 2,236 ಗಿರಿಜನರಿಗೆ ಗುಂಪು ವಿಮೆ ಮಾಡಿಸಲಾಗಿದೆ.

1989–90ನೇ ಸಾಲಿನಲ್ಲಿ ಗಿರಿಜನ ಉಪಯೋಜನೆಯಡಿಯಲ್ಲಿಯ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸರ್ಕಾರದ ಆಯವ್ಯಯದಲ್ಲಿ 144·79 ಲಕ್ಷ ರೂ. ಗಳನ್ನು ನೀಡಲಾಗಿದ್ದು ಜಿಲ್ಲಾ ಪರಿಷತ್ತಿನಿಂದ ಕ್ರಿಯಾ ಯೋಜನೆಯನ್ನು 251·15 ಲಕ್ಷ ರೂ. ಗಳಿಗೆ ತಯಾರಿಸಿ 163·80 ಲಕ್ಷ ರೂ. ಗಳನ್ನು ಈ ಕಾರ್ಯ ಕ್ರಮಗಳ ಅನುಷ್ಠಾನಕ್ಕಾಗಿ ವಿನಿಯೋಗಿಸಲಾಗಿದೆ.

### ಜೇನು ಕುರುಬರ ಅಭಿವೃದ್ಧಿ

ಮೈಸೂರು ಜಿಲ್ಲೆಯಲ್ಲಿ ವಾಸಿಸಲಾಗುತ್ತಿರುವ ಜೇನು ಕುರುಬ ಜನಾಂಗವನ್ನು ಆದಿವಾಸಿ ಜನಾಂಗಕ್ಕೆ (ಪಿ. ಟಿ.) ಸೇರಿದವರೆಂದು ಪರಿಗಣಿಸಿ ಇವರಿಗೆ ವಿಶೇಷ ಸವಲತ್ತುಗಳನ್ನು ಒದಗಿಸಲಾಗುತ್ತಿದೆ. ಈ ವರ್ಗಕ್ಕೆ ಸೇರಿದ 2,501 ಕುಟುಂಬಗಳು ಜಿಲ್ಲೆಯ 5 ತಾಲ್ಲೂಕುಗಳಲ್ಲಿಯ 113 ಹಾಡಿಗಳಲ್ಲಿ ವಾಸಿಸುತ್ತಿದ್ದಾರೆ. ಇವರ ಅಭಿವೃದ್ಧಿಗಾಗಿ 8·50 ಲಕ್ಷ ರೂ. ಗಳನ್ನು ವಿನಿಯೋಗಿಸಿ ಕಛೇರಿ ಸಿಬ್ಬಂದಿ, ನಿರ್ವಹಣೆ, ಆಶ್ರಮ ಶಾಲೆ, ಶಿಶುವಿಹಾರ ನಿರ್ವಹಣೆ ಹಾಗೂ ಜೇನು ಕುರುಬರ ವಿದ್ಯಾರ್ಥಿಗಳಿಗೆ ಮತ್ತು ಕುಟುಂಬಗಳಿಗೆ ವಿದ್ಯಾರ್ಥಿ ವೇತನ, ನಗದು ಧನ ಸಹಾಯ, ಪ್ರೋತ್ಸಾಹಧನ ನೀಡಿಕೆ ಮತ್ತು ಬೆಚ್ಚನೆಯ ಉಡುಪು ನೀಡಿಕೆ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗಿದೆ. ಈ ಬಾಬ್ತು ಕಾರ್ಯಕ್ರಮಗಳಿಂದ ಈ ವರ್ಗದ 1,850 ಗಿರಿಜನರು ಲಾಭ ಹೊಂದಿರುತ್ತಾರೆ.

Backward Communities Welfare

## 10. ಹಿಂದುಳಿದ ವರ್ಗಗಳ ಕಲ್ಯಾಣ

ಈ ಇಲಾಖೆಯಲ್ಲಿ ಮುಖ್ಯವಾಗಿ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ವಿದ್ಯಾರ್ಥಿಗಳಿಗೆ ವಿದ್ಯಾರ್ಥಿ ನಿಲಯಗಳ ಸೌಕರ್ಯ ಒದಗಿಸುವುದು ಮತ್ತು ವಿದ್ಯಾರ್ಥಿ ವೇತನ ನೀಡುವುದು, ಶಾಲಾ ಕಾಲೇಜಿನ ವಿದ್ಯಾರ್ಥಿಗಳಿಗೆ ಶುಲ್ಕ ವಿನಾಯಿತಿ ನೀಡುವುದು, ಎ–ಗುಂಪಿನ ವಿದ್ಯಾರ್ಥಿಗಳಿಗೆ ಭೋಜನ ನಿಮಿತ್ತ ಹೆಚ್ಚುವರಿ ವೆಚ್ಚವನ್ನು ನೀಡುವುದು, ವಿದ್ಯಾರ್ಥಿನಿಲಯಗಳ ಕಟ್ಟಡಗಳ ನಿರ್ಮಾಣ, ಆಶ್ರಮಶಾಲೆ ಮತ್ತು ಮಹಿಳಾ ಕಲ್ಯಾಣಕೇಂದ್ರಗಳ ನಿರ್ವಹಣೆ, ಹಿಂದುಳಿದ ಜನಾಂಗದ ಮಹಿಳೆಯರಿಗೆ ಹೊಲಿಗೆ ತರಬೇತಿ ಕೇಂದ್ರವನ್ನು ನಡೆಸುವುದು, ಬೆರಳಚ್ಚು ಮತ್ತು ಶೀಘ್ರಲಿಪಿಯ ತರಬೇತಿದಾರರಿಗೆ ಶಿಷ್ಯವೃತ್ತಿ ಭತ್ಯೆಯನ್ನು ನೀಡುವುದು (ಸ್ಟೈಫಂಡ್) ಮತ್ತು ಖಾಸಗಿ ಅನಾಥಾಲಯಗಳು ಹಾಗೂ ವಿದ್ಯಾರ್ಥಿನಿಲಯಗಳಿಗೆ ಅನುದಾನ ನೀಡಿಕೆ ಮುಂತಾದ ಕಾರ್ಯಕ್ರಮಗಳನ್ನು ಹಿಂದುಳಿದ ವರ್ಗಗಳ ಕಲ್ಯಾಣಕ್ಕಾಗಿ ಹಮ್ಮಿಕೊಂಡು 1989–90ನೇ ಸಾಲಿನಲ್ಲಿ ಜಿಲ್ಲೆಯಲ್ಲಿ ಈ ಕಾರ್ಯಕ್ರಮಗಳ ಅನುಷ್ಠಾನಕ್ಕಾಗಿ ಕೆಳಕಂಡಂತೆ ಹಣ ವಿನಿಯೋಗಿಸಲಾಗಿದೆ.

1) ಮೆಟ್ರಿಕ್ ಪೂರ್ವ ವಿದ್ಯಾರ್ಥಿ ನಿಲಯಗಳು ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳ ನಿರ್ವಹಣೆ ಮತ್ತು ಸುಧಾರಣೆ, ಹಾಸಿಗೆ ಪದಾರ್ಥಗಳ ಸರಬರಾಜು, ಪುಸ್ತಕ ನಿಧಿ ಸ್ಥಾಪನೆ, ವಿದ್ಯಾರ್ಥಿ ನಿಲಯಗಳಲ್ಲಿದ್ದು ಪ್ರಥಮ ದರ್ಜೆಯಲ್ಲಿ ಪಾಸಾದವರಿಗೆ ಉತ್ತೇಜನ,

ಆಟದ ಸಾಮಗ್ರಿ ಸರಬರಾಜು, ಮುಂತಾದ ಕಾರ್ಯ ಕ್ರಮಗಳ ನಿರ್ವಹಣೆಗಾಗಿ ಒಟ್ಟು 57·71 ಲಕ್ಷ ರೂ. ಗಳನ್ನು ಖರ್ಚು ಮಾಡಿ ಒಟ್ಟು 2,449 ಶಾಲಾ–ಕಾಲೇಜುಗಳಲ್ಲಿ ವ್ಯಾಸಂಗ ಮಾಡುವ ವಿದ್ಯಾರ್ಥಿಗಳಿಗೆ ಊಟ, ವಸತಿ ಮತ್ತು ಶೈಕ್ಷಣಿಕ ಸೌಲಭ್ಯಗಳನ್ನು ಕಲ್ಪಿಸಿದೆ. (ಅನುದಾನಿತ ವಿದ್ಯಾರ್ಥಿ ನಿಲಯಗಳು ಸೇರಿ).

2) ಜಿಲ್ಲೆಯಲ್ಲಿ ಶಾಲಾ–ಕಾಲೇಜುಗಳಲ್ಲಿ ಓದುತ್ತಿರುವ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಮೆಟ್ರಿಕ್ ಪೂರ್ವ ಮತ್ತು ಮೆಟ್ರಿಕ್ ನಂತರದ ವಿದ್ಯಾರ್ಥಿ ವೇತನಗಳ ನೀಡಿಕೆಗಾಗಿ 53·32 ಲಕ್ಷ ರೂ. ಗಳನ್ನು ಖರ್ಚುಮಾಡಿ ಒಟ್ಟು 42,698 ಶಾಲಾಕಾಲೇಜು ವಿದ್ಯಾರ್ಥಿಗಳಿಗೆ ಸೌಲಭ್ಯ ದೊರಕಿಸಿಕೊಟ್ಟಿದೆ.

3) ಡಿ. ಟಿ. ಜನಾಂಗದವರಿಗೆ ಕೊಳ್ಳೇಗಾಲ ತಾಲ್ಲೂಕಿನ ಕೆಂಪಯ್ಯನಹಟ್ಟಿ ಮಹಿಳಾ ಕಲ್ಯಾಣ ಕೇಂದ್ರದ ನಿರ್ವಹಣೆಗಾಗಿ 36,000 ರೂ. ಗಳನ್ನು ಖರ್ಚು ಮಾಡಿ 50 ಮಕ್ಕಳಿಗೆ ಅನುಕೂಲ ದೊರಕಿಸಿಕೊಟ್ಟಿದೆ.

4) ಎಸ್.ಟಿ. ಮತ್ತು ಎಸ್.ಎನ್.ಟಿ. ಮಕ್ಕಳಿಗಾಗಿ 3 ಆಶ್ರಮಶಾಲೆಗಳಿದ್ದು ಒಟ್ಟು 100 ಮಕ್ಕಳು ಆಶ್ರಯ ಪಡೆದಿರುತ್ತಾರೆ. ಈ ಸಂಬಂಧದಲ್ಲಿ ನಿರ್ವಹಣೆಗಾಗಿ ರೂ. 2·31 ಲಕ್ಷ ರೂ. ಗಳನ್ನು ಖರ್ಚುಮಾಡಿದೆ.

5) ಗುಂಡ್ಲುಪೇಟೆಯಲ್ಲಿ ಒಂದು ಹೊಲಿಗೆ ತರಬೇತಿ ಕೇಂದ್ರವಿದ್ದು 20 ಮಂದಿ ನಿರುದ್ಯೋಗಿ ಮಹಿಳೆಯರು ತರಬೇತಿ ಹೊಂದಿರುತ್ತಾರೆ. ಈ ಸಂಬಂಧದಲ್ಲಿ ಒಟ್ಟು 0·35 ಲಕ್ಷ ರೂ. ಗಳನ್ನು ಖರ್ಚುಮಾಡಿರುತ್ತೆ.

6) ಎ–ಗುಂಪಿನ ವಿದ್ಯಾರ್ಥಿಗಳಿಗೆ ಹೆಚ್ಚುವರಿ ಭೋಜನ ನಿಮಿತ್ತ ವೆಚ್ಚವನ್ನು ಸಂದಾಯ ಮಾಡುವ ಕಾರ್ಯಕ್ರಮದಲ್ಲಿ 0·26 ಲಕ್ಷ ರೂ.ಗಳನ್ನು ಖರ್ಚುಮಾಡಿ ಒಟ್ಟು 84 ಎ–ಗುಂಪಿನ ವಿದ್ಯಾರ್ಥಿಗಳಿಗೆ ಸೌಲಭ್ಯವನ್ನು ದೊರಕಿಸಿಕೊಟ್ಟಿದೆ.

7) ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಬೆರಳಚ್ಚು ಮತ್ತು ಶೀಘ್ರಲಿಪಿಯಲ್ಲಿ ತರಬೇತಿ ನೀಡಲು 0.13 ಲಕ್ಷ ರೂ. ಗಳನ್ನು ಖರ್ಚು ಮಾಡಿದೆ. ಒಟ್ಟು 30 ಅಭ್ಯರ್ಥಿಗಳು ಪ್ರಯೋಜನ ಪಡೆದಿರುತ್ತಾರೆ.

8) ಜಿಲ್ಲೆಯಲ್ಲಿ 17 ಅನಾಥಾಲಯಗಳು ಮತ್ತು ಸಾಕು ಮನೆಗಳಲ್ಲಿ ಆಶ್ರಯ ಪಡೆದ ಅನಾಥ ಮಕ್ಕಳಿಗೆ ಊಟದ ಬಾಬ್ತು ಅನುದಾನ ನೀಡಲು 5·45 ಲಕ್ಷ ರೂ.ಗಳನ್ನು ಖರ್ಚುಮಾಡಿ 1268 ಅನಾಥಮಕ್ಕಳಿಗೆ ಆಶ್ರಯವನ್ನು ನೀಡಿದೆ.

9) ಕಛೇರಿ ಕಾರ್ಯನಿರ್ವಾಹಕ ಸಿಬ್ಬಂದಿ ವೆಚ್ಚಕ್ಕಾಗಿ ಒಟ್ಟು 3·89 ಲಕ್ಷ ರೂ.ಗಳನ್ನು ಖರ್ಚು ಮಾಡಿದೆ.

10) ವಿದ್ಯಾರ್ಥಿನಿಲಯಗಳಿಗೆ ಕಟ್ಟಡಗಳನ್ನು ನಿರ್ಮಾಣಮಾಡುವ ಕಾರ್ಯಕ್ರಮದಡಿಯಲ್ಲಿ ಒಟ್ಟು 4·00 ಲಕ್ಷ ರೂ. ಗಳನ್ನು ಖರ್ಚುಮಾಡಿದೆ. ಕುವೆಂಪುನಗರದಲ್ಲಿರುವ ಬಾಲಕಿಯರ ವಿದ್ಯಾರ್ಥಿ ನಿಲಯಕ್ಕೆ ಕಾಂಪೌಂಡ್ ನಿರ್ಮಾಣಕ್ಕೆ 2·00 ಲಕ್ಷ ರೂ. ಗಳು ಮತ್ತು ಹಾಲಿ ಸರಸ್ವತಿಪುರಂನಲ್ಲಿರುವ ಕಾಲೇಜು ವಿದ್ಯಾರ್ಥಿನಿಲಯ ಕಟ್ಟಡ ನಿರ್ಮಾಣಕ್ಕೆ 2·00 ಲಕ್ಷ ರೂ.ಗಳನ್ನು ಖರ್ಚು ಮಾಡಿದೆ.

11) ಶಾಲಾ ಕಾಲೇಜುಗಳಲ್ಲಿ ಓದುವ ವಿದ್ಯಾರ್ಥಿಗಳಿಗೆ ಶುಲ್ಕವಿನಾಯ್ತಿ ನೀಡುವ ಬಾಬ್ತಿಗೆ 22·79 ಲಕ್ಷ ರೂ. ಗಳನ್ನು ಖರ್ಚುಮಾಡಿ ಒಟ್ಟು 32,823 ವಿದ್ಯಾರ್ಥಿಗಳಿಗೆ ಸೌಲಭ್ಯ ನೀಡಲಾಗಿದೆ.

ಹೀಗೆ ಮೇಲ್ಕಂಡ ಈ ಇಲಾಖೆಯ ಎಲ್ಲಾ ಕಾರ್ಯಕ್ರಮಗಳನ್ನು 1989–90ನೇ ಸಾಲಿನಲ್ಲಿ ಅನುಷ್ಠಾನಕ್ಕೆ ತಂದಿದೆ. ಯೋಜನೆ ಅಡಿಯಲ್ಲಿ ಒದಗಿಸಿದ್ದ 18·23 ಲಕ್ಷ ರೂಗಳ ಪೈಕಿ 18·13 ಲಕ್ಷ ರೂ. ಗಳನ್ನು ಖರ್ಚು ಮಾಡಿದೆ. ಯೋಜನೇತರ ಬಾಬ್ತಿನಲ್ಲಿ ಒದಗಿಸಲಾಗಿದ್ದ 146·22 ಲಕ್ಷ ರೂ. ಗಳ ಪೈಕಿ 132·23 ಲಕ್ಷ ರೂ. ಗಳನ್ನು ಖರ್ಚುಮಾಡಲಾಗಿದೆ.

ಜಿಲ್ಲೆಯಲ್ಲಿ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮವಿದ್ದು ಬ್ಯಾಂಕುಗಳ ಮುಖಾಂತರ 1989–90ನೇ ಸಾಲಿನಲ್ಲಿ ಒಟ್ಟು 112 ಮಂದಿಗೆ ಸಾಲ ದೊರಕಿಸಿಕೊಟ್ಟು

2·79 ಲಕ್ಷ ರೂ. ಸಾಲುಧನ ನೀಡಿದೆ (ಒಟ್ಟು ಸಾಲದ ಮೊತ್ತ 8·43 ಲಕ್ಷರೂ.) ನಿಗಮದ ವತಿಯಿಂದ ಸ್ವಯಂ-ಉದ್ಯೋಗಯೋಜನೆ ವಾಹನಚಾಲನಾ ತರಬೇತಿ ಕಾರ್ಯಕ್ರಮದಲ್ಲಿ ಒಟ್ಟು 19 ಮಂದಿಗೆ ತರಬೇತಿ ನೀಡಿ 0·18 ಲಕ್ಷ ರೂ. ಗಳನ್ನು ಖರ್ಚುಮಾಡಿದೆ. ಜಿಲ್ಲೆಯಲ್ಲಿ ಈ ಕಾರ್ಯಕ್ರಮಗಳು ಮೈಸೂರು ಜಿಲ್ಲಾಧಿಕಾರಿಗಳ ಅಧೀನದಲ್ಲಿ ಕಾರ್ಯಗತವಾಗುತ್ತಿದೆ.

ಜಿಲ್ಲೆಯಲ್ಲಿ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ವತಿಯಿಂದ ಬ್ಯಾಂಕುಗಳ ಮುಖಾಂತರ 1989–90ನೇ ಸಾಲಿನಲ್ಲಿ ಒಟ್ಟು 32 ಮಂದಿಗೆ ಸಾಲ ದೊರಕಿಸಿಕೊಟ್ಟಿದೆ. ನಿಗಮದ ಸಾಲುಧನ 0·86 ಲಕ್ಷ ರೂ. (ಸಾಲದ ಮೊತ್ತ 2·89 ಲಕ್ಷ ರೂ.) ನಿಗಮದ ವತಿಯಿಂದ ಸ್ವಯಂ–ಉದ್ಯೋಗ ವಾಹನ ಚಾಲನಾ ತರಬೇತಿಯ ಕಾರ್ಯಕ್ರಮದಲ್ಲಿ 11 ಮಂದಿಗೆ ತರಬೇತಿ ನೀಡಿ ಒಟ್ಟು 0·12 ಲಕ್ಷ ರೂ. ಗಳನ್ನು ಖರ್ಚುಮಾಡಿದೆ. ಜಿಲ್ಲೆಯಲ್ಲಿ ಈ ಕಾರ್ಯಕ್ರಮಗಳು ಜಿಲ್ಲಾಪರಿಷತ್ತಿನ ಅಧೀನದಲ್ಲಿ ಕಾರ್ಯಗತವಾಗಿದೆ.

## 11. ಭೂಸಾರ ಸಂರಕ್ಷಣಾ

ಮೈಸೂರು ಜಿಲ್ಲೆಯ ಒಟ್ಟು ಸಾಗುವಳಿಗೊಳಪಡುವ ಪ್ರದೇಶಗಳಲ್ಲಿ ಕೇವಲ ಶೇ. 21·3 ಪ್ರದೇಶ ನೀರಾವರಿಗೊಳಪಡುತ್ತಿದೆ. ಉಳಿದ ಶೇ. 78·7 ಪ್ರದೇಶ ಬೇಸಾಯಕ್ಕಾಗಿ ಮಳೆಯನ್ನು ಆಶ್ರಯಿಸಿರುತ್ತದೆ. ಬೇಸಾಯಕ್ಕೆ ಯೋಗ್ಯವಾದ ಮಣ್ಣು ಭೂಮಿಯ ಮೇಲ್ಪದರ 6 ಅಂಗುಲದಿಂದ 12 ಅಂಗುಲದಷ್ಟು ಸೀಮಿತಗೊಂಡಿದೆ. ಈ ಪದರದಲ್ಲಿ ಬೆಳೆಗೆ ಬೇಕಾದ ಪೋಷಕಾಂಶಗಳಿದ್ದು ಇದನ್ನು ಸಂರಕ್ಷಿಸಬೇಕಾದ್ದು ಆದ್ಯ ಕರ್ತವ್ಯವಾಗಿರುತ್ತದೆ. ಭೂಮಿಯ ಮೇಲ್ಮೈ ಇಳಿಜಾರುಗಳಿರುವುದರಿಂದ ಮಳೆ ನೀರು ಹರಿಯುವಾಗ ಮಣ್ಣು ಸವಕಳಿಗೆ ಒಳಪಡುತ್ತದೆ. ಸವಕಳಿಯಿಂದ ಮೇಲ್ಮಣ್ಣು ಕೊಚ್ಚಿ ಹೋಗುವುದರಿಂದ ಆ ಪ್ರದೇಶ ಬರಡಾಗುತ್ತದೆ. ಈ ಮೇಲ್ಮಣ್ಣು ಜಲಾಶಯ, ಕೆರೆ, ಕುಂಟೆಗಳನ್ನು ತುಂಬಿ ಅವು ನೀರು ನಿಲ್ಲುವ ಸಾಮರ್ಥ್ಯವನ್ನು ಕಡಿಮೆ ಮಾಡುತ್ತದೆ. ಆದ್ದರಿಂದ ಪ್ರತಿ ಹಿಡುವಳಿಯಲ್ಲೂ ಆಗುವ ಭೂ ಸವಕಳಿಯನ್ನು ತಡೆದು ಹೆಚ್ಚಿನ ನೀರನ್ನು ಸುಗಮವಾಗಿ ಹರಿದು ಹೋಗುವಂತೆ ಮಾಡುವುದು ಹಾಗೂ ಕೃಷಿ ಕೊಳ ಮತ್ತು ನಾಲಾ ಬದು ಅಥವಾ ಚೆಕ್ ಡ್ಯಾಂ ಗಳಲ್ಲಿ ಹೆಚ್ಚಿನ ನೀರನ್ನು ಸಂಗ್ರಹಿಸಿ ಮಳೆಯಿಲ್ಲದ ಕಾಲದಲ್ಲಿ ಬೆಳೆಗಳಿಗೆ ಉಪಯೋಗಿಸಿಕೊಳ್ಳುವುದು ಭೂಸಾರ ಸಂರಕ್ಷಣೆಯ ಉದ್ದೇಶವಾಗಿದೆ.

ರಾಷ್ಟ್ರೀಯ ಜಲಾನಯನ ಅಭಿವೃದ್ಧಿ ಯೋಜನೆ, ಅಭಿವೃದ್ಧಿ ಮತ್ತು ಪರಿಕರ ಕಿಟ್ಟುಗಳು ಸಣ್ಣ ಮತ್ತು ಅತಿಸಣ್ಣ ರೈತರ ಸಹಾಯಕ ಕೇಂದ್ರ ಪುರಸ್ಕೃತ (ಭೂ ಅಭಿವೃದ್ಧಿ) ಭೂಮಿಯ ಪ್ರಾಯೋಗಿಕ ಭೂಸಾರ ರಕ್ಷಣೆ ಮತ್ತು ತಾಂತ್ರಿಕ ಖುಷ್ಕಿ ಬೇಸಾಯ ಯೋಜನೆ ಮತ್ತು ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸಲಾಗಿದೆ. ಈ ಎಲ್ಲಾ ಯೋಜನೆಗಳಿಗಾಗಿ 42·1 ಲಕ್ಷ ರೂ.ಗಳು ಬಿಡುಗಡೆಯಾಗಿ 38·34 ಲಕ್ಷ ರೂ. ಖರ್ಚಾಗಿದೆ. ಈ ಹಣದಲ್ಲಿ 6·23 ಲಕ್ಷ ರೂ. ಸಿಬ್ಬಂದಿ ವೆಚ್ಚಕ್ಕಾಗಿ ಖರ್ಚಾಗಿದೆ. ಉಳಿದ 32·11 ಲಕ್ಷ ರೂ. ಗಳನ್ನು ವಿವಿಧ ಭೂಸಾರ ಸಂರಕ್ಷಣಾ ಕಾಮಗಾರಿಗಳಿಗಾಗಿ ಖರ್ಚು ಮಾಡಲಾಗಿದೆ.

ಯೋಜನೇತರದಲ್ಲಿ 34·76 ಲಕ್ಷ ರೂ.ಗಳು ಬಿಡುಗಡೆಯಾಗಿದ್ದು 40·91 ಲಕ್ಷ ರೂ. ಗಳು ಖರ್ಚಾಗಿರುತ್ತದೆ. ಈ ಯೋಜನೇತರ ಅನುದಾನವು ಸಿಬ್ಬಂದಿ ವೆಚ್ಚಕ್ಕಾಗಿ ಖರ್ಚು ಮಾಡಲಾಗಿದೆ.






05302

Agriculture

## 12. ಕೃಷಿ

ಮೈಸೂರು ಜಿಲ್ಲೆ ಕರ್ನಾಟಕ ರಾಜ್ಯದ ದಕ್ಷಿಣಗಡಿಯಲ್ಲಿದೆ ಜಿಲ್ಲೆಯಲ್ಲಿ ಒಟ್ಟು 11 ತಾಲ್ಲೂಕುಗಳಿದ್ದು 4,98,408 ಹೆಕ್ಟೇರ್ ಬಿತ್ತನೆ ಕ್ಷೇತ್ರವಿರುತ್ತದೆ. ಮತ್ತು ಒಟ್ಟು ಭೌಗೋಳಿಕ ಕ್ಷೇತ್ರದ ಶೇ. 40·3 ರಷ್ಟು ಇರುತ್ತದೆ. ಇದರಲ್ಲಿ ಶೇ. 19 ಭಾಗ ಮಾತ್ರ ನೀರಾವರಿ ಪ್ರದೇಶವಿರುತ್ತದೆ. ಮತ್ತು ಉಳಿದ ಶೇ. 81 ಭಾಗದಲ್ಲಿ ಖುಷ್ಕಿ ಬೇಸಾಯವನ್ನು ಅವಲಂಬಿಸಿರುತ್ತದೆ. ಜಿಲ್ಲೆಯಲ್ಲಿ ಹವಾಮಾನ ಪರಿಸ್ಥಿತಿಯ ಆಧಾರದ ಮೇಲೆ ಎರಡು ಕೃಷಿ ವಲಯಗಳಿದ್ದು, ಚಾಮರಾಜನಗರ, ಗುಂಡ್ಲುಪೇಟೆ, ನಂಜನಗೂಡು, ಕೊಳ್ಳೇಗಾಲ, ಯಳಂದೂರು, ಟಿ. ನರಸೀಪುರ, ಮೈಸೂರು, ಮತ್ತು ಕೃಷ್ಣರಾಜನಗರ ಈ ಎಂಟು ತಾಲ್ಲೂಕುಗಳು ದಕ್ಷಿಣದ ಒಣ ವಲಯಕ್ಕೆ ಸೇರಿದ್ದು (ಕೃಷಿವಲಯ 6), ಇನ್ನುಳಿದ ಮೂರು ತಾಲ್ಲೂಕುಗಳಾದ ಹೆಗ್ಗಡದೇವನ ಕೋಟೆ, ಪಿರಿಯಾಪಟ್ಟಣ ಮತ್ತು ಹುಣಸೂರು ತಾಲ್ಲೂಕುಗಳು ದಕ್ಷಿಣ ಅರೆ ಮಲೆನಾಡು ವಲಯ ಪ್ರದೇಶಕ್ಕೆ ಸೇರಿರುತ್ತವೆ (ವಲಯ7). ಒಟ್ಟು ಬಿತ್ತನೆ ಕ್ಷೇತ್ರದ ಶೇ. 85 ಭಾಗ ವ್ಯವಸಾಯ ಬೆಳೆಗಳನ್ನು ಪ್ರತಿನಿಧಿಸುತ್ತದೆ. ಭತ್ತ, ರಾಗಿ, ಜೋಳ, ನೆಲಗಡಲೆ, ಸೂರ್ಯಕಾಂತಿ, ಹತ್ತಿ, ಹೊಗೆಸೊಪ್ಪು, ಅಲಸಂದೆ ಬೆಳೆಗಳು ಮುಖ್ಯ ಬೆಳೆಗಳಾಗಿರುತ್ತವೆ. ಅಲ್ಲದೆ ಮುಸುಕಿನ ಜೋಳ, ಸಜ್ಜೆ, ಎಳ್ಳು, ಉದ್ದು, ಹೆಸರು, ಕಬ್ಬು, ಬೆಳೆಗಳು ಇತರೆ ಬೆಳೆಗಳಾಗಿರುತ್ತವೆ.

ಮೈಸೂರು ಜಿಲ್ಲೆ ದಖನ್ ಪ್ರಸ್ಥಭೂಮಿಯಲ್ಲಿದ್ದು ಭೌಗೋಳಿಕವಾಗಿ 12° ಯಿಂದ 11°·6 ರೇಖಾಂಶದಲ್ಲಿದ್ದು ಉತ್ತರದ 75° ಯಿಂದ 77°·7 ಅಕ್ಷಾಂಶದಲ್ಲಿರುತ್ತದೆ ಮತ್ತು ಸಮುದ್ರ ಮಟ್ಟದಿಂದ 665 ಮೀಟರ್ ಎತ್ತರದಲ್ಲಿರುತ್ತದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆ ದಕ್ಷಿಣದ ಒಳ ವಲಯದಲ್ಲಿ 732 ಮಿ.ಮೀ. ಬೀಳುತ್ತಿದ್ದು ದಕ್ಷಿಣದ ಅರೆ ಮಲೆನಾಡು ವಲಯದಲ್ಲಿ 843 ಮಿ.ಮೀ. ಮಳೆಯಾಗಿರುತ್ತದೆ.

ಜಿಲ್ಲೆಯಲ್ಲಿ ಹಲವು ಮಣ್ಣು ವಿಧಗಳಲ್ಲಿ ಹೆಚ್ಚು ಪ್ರದೇಶ ಮರಳು ಮಿಶ್ರಿತ ಕೆಂಪು ಮಣ್ಣಿನಿಂದ ಕೂಡಿದ್ದು ಅಲ್ಲಲ್ಲಿ ತೆಳು ಕಪ್ಪು ಮಣ್ಣಿನ ಪ್ರದೇಶವಿರುತ್ತದೆ. ಸಾಮಾನ್ಯವಾಗಿ ಮಣ್ಣಿನ ರಸಸಾರ ತಟಸ್ಥವಾಗಿದ್ದು ಒಟ್ಟು ಲವಣಾಂಶ ಕ್ಷೇಮಕರ ನಿಗದಿಯಲ್ಲಿದೆ. ಜಿಲ್ಲೆಯಲ್ಲಿ ಅಚ್ಚುಕಟ್ಟು ಪ್ರದೇಶದ ಬಹುಭಾಗ ಕಾವೇರಿ ಮತ್ತು ಕಬಿನಿ ಜಲಾಶಯದಿಂದ ನೀರಾವರಿಯಾಗಿರುತ್ತದೆ.

1989–90ನೇ ಸಾಲಿನಲ್ಲಿ 3·8 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಏಕದಳ ಧಾನ್ಯಗಳು, 1·27 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ದ್ವಿದಳಧಾನ್ಯಗಳು ಹಾಗೂ 0·72 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಎಣ್ಣೆಕಾಳುಗಳನ್ನು ಬೆಳೆಯಲು ಗುರಿ ಹೊಂದಿದ್ದು ಅನುಕ್ರಮವಾಗಿ 2·88 ಲಕ್ಷ 1·11ಲಕ್ಷ ಹಾಗೂ 0·81 ಲಕ್ಷ ಹೆಕ್ಟೇರ್‌ನಷ್ಟು ಸಾಧನೆ ಮಾಡಲಾಗಿದೆ. ಇದರಿಂದ ಜಿಲ್ಲೆಯಲ್ಲಿ 5·37 ಲಕ್ಷ ಟನ್ ಏಕದಳ ಧಾನ್ಯಗಳೂ, 0·62 ಲಕ್ಷ ಟನ್ ದ್ವಿದಳ ಧಾನ್ಯಗಳೂ (ಒಟ್ಟು 5·99 ಲಕ್ಷ ಟನ್ ಆಹಾರ ಧಾನ್ಯಗಳು) ಹಾಗೂ 0·52 ಲಕ್ಷ ಟನ್‌ಗಳಷ್ಟು ಎಣ್ಣೆ ಕಾಳುಗಳನ್ನು ಅಂದಾಜು ಉತ್ಪಾದನೆ ಮಾಡಲಾಗಿದೆ.

1989–90ನೇ ಸಾಲಿನಲ್ಲಿ ಕೃಷಿ ಇಲಾಖೆಗೆ 42·58 ಲಕ್ಷ ರೂ. ಗಳನ್ನು ಯೋಜನೆಯಲ್ಲಿ ನೀಡಲಾಗಿದೆ. ಕೃಷಿ ಇಲಾಖೆಯ ಮುಖ್ಯ ಯೋಜನೆಗಳೆಂದರೆ ಬೀಜೋತ್ಪಾದನಾ ಕೇಂದ್ರಗಳನ್ನು ಅಭಿವೃದ್ಧಿ ಪಡಿಸುವುದು, ವಿವಿಧ ರೀತಿಯ ಕ್ರಿಮಿ ಕೀಟ ಹಾಗೂ ಸಸ್ಯ ರೋಗಗಳನ್ನು ಸಸ್ಯ ಸಂರಕ್ಷಣಾ ಕಾರ್ಯಕ್ರಮದ ಮೂಲಕ ತಡೆಗಟ್ಟುವುದು. ಪ್ರಾತ್ಯಕ್ಷತೆಗಳನ್ನು ಏರ್ಪಡಿಸಿ ರೈತರಿಗೆ ಹೆಚ್ಚು ಇಳುವರಿ ತೆಗೆಯುವ ಬಗ್ಗೆ ತಿಳುವಳಿಕೆ ನೀಡುವುದು. ಸುಧಾರಿತ ಬೀಜ, ರಸಗೊಬ್ಬರ, ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿಗಳು ಹಾಗೂ ಸುಧಾರಿತ ಕೃಷಿ ಉಪಕರಣಗಳನ್ನು ಒದಗಿಸುವುದು ಆಗಿದೆ. 1990ರ ಮಾರ್ಚ್ ಅಂತ್ಯದವರೆಗೆ 103·21 ಲಕ್ಷ ರೂ. ಗಳು (ಯೋಜನೇತರವೂ ಸೇರಿ) ಈ ಇಲಾಖೆಯಲ್ಲಿ ಖರ್ಚಾಗಿದೆ.

### 1989–90ನೇ ಸಾಲಿನಲ್ಲಿ ಸಾಧಿಸಲಾದ ಪ್ರಗತಿಯ ಸಂಕ್ಷಿಪ್ತ ವರದಿ

1. ವಿವಿಧ ಸಸ್ಯ ಸಂರಕ್ಷಣಾ ಯೋಜನೆಯಡಿ 1650 ಫಲಾನುಭವಿಗಳಿಗೆ ಶೇ. 50ರ ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿಗಳನ್ನು ವಿತರಿಸಲಾಗಿದೆ.

2 19 ಹೆಕ್ಟೇರ್ ಪ್ರದೇಶದಲ್ಲಿ ಕಬ್ಬಿನ ಪ್ರಥಮ ಒಟ್ಲು ಪ್ರದೇಶ ಕೈಗೊಳ್ಳಲು ನೆರವು ನೀಡಲಾಗಿ ಇದರಿಂದ ಬೆಳೆದಂತ ಕಬ್ಬಿನ ತುಂಡುಗಳನ್ನು ಇತರೆ ರೈತರಿಗೆ ವಿತರಿಸಲು ಕ್ರಮ ಕೈಗೊಳ್ಳಲಾಗಿದೆ.

3. ರಾಷ್ಟ್ರೀಯ ದ್ವಿದಳಧಾನ್ಯಾಭಿವೃದ್ಧಿ ಯೋಜನೆಯಡಿಯಲ್ಲಿ 1795 ಮಂದಿ ಫಲಾನುಭವಿಗಳಿಗೆ ಮಿನಿಕಿಟ್ ಬೀಜದ ಕಿರುಬುತ್ತಿಗಳನ್ನು, 8 ಹೆಕ್ಟೇರ್ ಪ್ರದೇಶದಲ್ಲಿ ಬ್ಲಾಕ್ ಪ್ರಾತ್ಯಕ್ಷಿತೆಗಳನ್ನು, 15 ಹೆಕ್ಟೇರ್ ಪ್ರದೇಶದಲ್ಲಿ ಅಳವಡಿಕೆ ಪ್ರಯೋಗಗಳನ್ನು, 1002 ಫಲಾನುಭವಿಗಳಿಗೆ ಶೇ 100ರ ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿಗಳನ್ನು ಒದಗಿಸಲಾಗಿದೆ. 664 ಕ್ವಿಂಟಾಲ್ ಬಿತ್ತನೆ ಬೀಜಗಳನ್ನು ರೈತರಿಗೆ ರಿಯಾಯಿತಿ ದರದಲ್ಲಿ ಒದಗಿಸಲು ಕರ್ನಾಟಕ ರಾಜ್ಯ ಬೀಜ ನಿಗಮಕ್ಕೆ 0·53 ಲಕ್ಷ ರೂಪಾಯಿಗಳ ನೆರವು ನೀಡಲಾಗಿದೆ.

4. ಎಣ್ಣೆ ಬೀಜಗಳ ರಾಷ್ಟ್ರೀಯ ಒತ್ತುವರಿ ಕಾರ್ಯಕ್ರಮದಡಿ 592 ಹೆಕ್ಟೇರ್ ಪ್ರದೇಶದಲ್ಲಿ ನೆಲಗಡಲೆ ಹಾಗೂ ಸೂರ್ಯಕಾಂತಿ ಪ್ರಾತ್ಯಕ್ಷಿತೆಗಳನ್ನು, 2059 ಹೆಕ್ಟೇರ್ ಪ್ರದೇಶಕ್ಕೆ ಶೇ. 50 ರಷ್ಟು ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿಗಳನ್ನು, 224 ಫಲಾನುಭವಿಗಳಿಗೆ ಶೇ. 50ರ ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಉಪಕರಣಗಳನ್ನು, 200 ಫಲಾನುಭವಿಗಳಿಗೆ ಶೇ. 50 ರ ರಿಯಾಯಿತಿ ದರದಲ್ಲಿ ಸುಧಾರಿತ ಕೃಷಿ ಉಪಕರಣಗಳನ್ನು ಹಾಗೂ 1168 ಟನ್‌ಗಳಷ್ಟು ಜಿಪ್ಸಂ ಲವಣವನ್ನು ವಿತರಣೆ ಮಾಡಲಾಗಿದೆ.

5. ಕೇಂದ್ರ ಪುರಸ್ಕೃತ ಪರಿಕರ ಕಿಟ್ಟುಗಳನ್ನು ಸಣ್ಣ ಮತ್ತು ಅತಿಸಣ್ಣ ರೈತರಿಗೆ ಸಹಾಯ ನೀಡುವ ಯೋಜನೆಯಡಿ 28,092 ಮಂದಿ ಫಲಾನುಭವಿಗಳಿಗೆ ವಿವಿಧ ರೀತಿಯ ಬಿತ್ತನೆ ಬೀಜದ ಕಿರು ಬುತ್ತಿಗಳನ್ನು ಒದಗಿಸಲಾಗಿದೆ.

6. ಜೀತದಾಳುಗಳ ಪುನರ್ವಸತಿ ಯೋಜನೆಯಡಿ 512 ಮಂದಿ ಫಲಾನುಭವಿಗಳಿಗಾಗಿ 32 ಲಕ್ಷ ರೂ. ಗಳನ್ನು ವಿನಿಯೋಗಿಸಲಾಗಿದೆ.

Horticulture

## 13. ತೋಟಗಾರಿಕೆ ಇಲಾಖೆ

ರೈತರು ತೋಟಗಾರಿಕೆಯನ್ನು ಕೈಗೊಂಡು ಹೆಚ್ಚು ಲಾಭದಾಯಕ ಬೆಳೆಗಳಾದ ಹಣ್ಣು, ತರಕಾರಿ, ಹೂವು ಮತ್ತು ಪ್ಲಾಂಟೇಷನ್ ಬೆಳೆಗಳನ್ನೂ ಬೆಳೆಸಲು ಪ್ರೋತ್ಸಾಹ ನೀಡುವುದಕ್ಕಾಗಿ 1989–90ನೇ ಸಾಲಿನಲ್ಲಿ 25·17 ಲಕ್ಷ ರೂ. ಗಳನ್ನು ಯೋಜನೆಯಡಿಯಲ್ಲಿಯೂ, 38·05 ಲಕ್ಷ ರೂ. ಗಳನ್ನು ಯೋಜನೇತರ ಅಡಿಯಲ್ಲಿಯೂ, ಹೀಗೆ ಒಟ್ಟು 63·22 ಲಕ್ಷ ರೂ ಗಳನ್ನು ವೆಚ್ಚ ಮಾಡಲಾಗಿದೆ.

ತೋಟಗಾರಿಕೆ ಬೆಳೆಗಳ ವಿಸ್ತೀರ್ಣ ಮತ್ತು ಉತ್ಪತ್ತಿಯನ್ನು ಹೆಚ್ಚಿಸಲು ಉತ್ತಮ ಗುಣಮಟ್ಟದ ರೋಗರಹಿತ ಕಸಿ ಸಸಿ ಹಾಗೂ ತರಕಾರಿ ಬೀಜಗಳನ್ನು ಇಲಾಖೆಯ ತೋಟಗಾರಿಕೆಯ ಕ್ಷೇತ್ರಗಳಲ್ಲಿ ತಜ್ಞರ ಮಾರ್ಗದರ್ಶನದಲ್ಲಿ ಉತ್ಪತ್ತಿ ಮಾಡಿ ರೈತರಿಗೆ ಸುಲಭ ಬೆಲೆಗೆ ಹಂಚುವುದು ಹಾಗೂ ಜಿಲ್ಲಾ ಹಾಗೂ ತಾಲ್ಲೂಕು ಮಟ್ಟದಲ್ಲಿ ತಾಂತ್ರಿಕ ಸಲಹೆಯನ್ನು ನೀಡುವುದು. ತೋಟಗಾರಿಕೆ ಬೆಳೆಗಳಿಗೆ ಬೀಳುವ ಕೀಟ ಅಥವಾ ರೋಗಬಾಧೆಯನ್ನು ನಿಯಂತ್ರಿಸಲು ಸಲಹೆ ಹಾಗೂ ಕ್ರಮ ಕೈಗೊಳ್ಳುವುದು ಮುಖ್ಯ ಗುರಿ.

1989–90ನೇ ಸಾಲಿನಲ್ಲಿ 3·31 ಲಕ್ಷ ವಿವಿಧ ಜಾತಿಯ ಹಣ್ಣಿನ ಗಿಡಗಳನ್ನು ವಿತರಣೆ ಮಾಡಿ

1559 ಹೆಕ್ಟೇರ್ ಪ್ರದೇಶವನ್ನು ಹೊಸದಾಗಿ ಹಣ್ಣಿನ ಬೆಳೆಗಳಡಿಯಲ್ಲಿ ತರಲಾಗಿದೆ. ಇದೇ ರೀತಿ 0·93 ಲಕ್ಷ ತೆಂಗಿನ ಸಸಿಗಳನ್ನು ವಿತರಣೆ ಮಾಡಿ 618 ಹೆಕ್ಟೇರ್ ಪ್ರದೇಶವನ್ನು ಹೊಸದಾಗಿ ತೆಂಗಿನ ಬೆಳೆಯಡಿಯಲ್ಲಿಯೂ, 39 ಕ್ವಿಂಟಾಲ್ ತರಕಾರಿ ಬೀಜಗಳನ್ನು ವಿತರಣೆ ಮಾಡಿ 442 ಹೆಕ್ಟೇರ್ ಪ್ರದೇಶವನ್ನು ತರಕಾರಿ ಬೆಳೆಗಳಡಿಯಲ್ಲಿಯೂ ತರಲಾಗಿದೆ. ಇದೇ ಅವಧಿಯಲ್ಲಿ 75 ಜನ ರೈತರಿಗೆ ಆಧುನಿಕ ತೋಟಗಾರಿಕೆಯ ತಂತ್ರಜ್ಞಾನಗಳ ಬಗ್ಗೆ ಹಾಗೂ 100 ಜನ ಗ್ರಾಮೀಣ ಮಹಿಳೆಯರಿಗೆ ಹಣ್ಣು ಮತ್ತು ತರಕಾರಿಗಳ ಸಂಸ್ಕರಣೆ ಮತ್ತು ಜೋಪಾಸಣೆಯ ಬಗ್ಗೆ ಪ್ರಾತ್ಯಕ್ಷತಾ ತರಬೇತಿಯನ್ನು ನೀಡಲಾಗಿದೆ. 24 ಜನ ಸಣ್ಣ ತೆಂಗು ಬೆಳೆಗಾರರಿಗೆ ಪಂಪ್‌ಸೆಟ್ ಸ್ಥಾಪಿಸಲು ಪ್ರತಿ ಫಲಾನುಭವಿಗೆ 1000 ರೂ. ಗಳಂತೆ ಸಹಾಯಧನ ನೀಡಲಾಗಿದೆ. ಸಂಕೀರ್ಣ ತಳಿಯ ತರಕಾರಿ ಬೀಜಗಳನ್ನು 1000 ಜನ ತೋಟಗಾರರಿಗೆ ವಿತರಿಸಲಾಗಿದೆ. ತೋಟಗಾರಿಕೆ ಬೆಳೆಗಳನ್ನು ಬೆಳೆಯುವ 250 ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಶೇ. 50ರ ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿಯನ್ನು ಒದಗಿಸಲಾಗಿದೆ.

ವಿಶೇಷ ಘಟಕ ಯೋಜನೆಯಡಿ 15 ಹರಿಜನ ಅಭ್ಯರ್ಥಿಗಳಿಗೆ 10 ತಿಂಗಳ ಅವಧಿಯ ತೋಟಗಾರಿಕೆಯ ತರಬೇತಿಯನ್ನು ನೀಡಲಾಗಿದೆ. 1988–89ನೇ ಸಾಲಿನಲ್ಲಿ ನಿರ್ಮಿಸಲಾಗಿದ್ದ 1 ಎಕರೆ ತೆಂಗಿನ : ಹಣ್ಣಿನ 291 ತೋಟಗಳನ್ನು ಪಾಲನೆ ಮಾಡಲಾಗಿದೆ. 1989–90ನೇ ಸಾಲಿನಲ್ಲಿ 305 ಒಂದು ಎಕರೆ ತೆಂಗಿನ : ಹಣ್ಣಿನ ತೋಟಗಳನ್ನು ಫಲಾನುಭವಿಗಳಿಗೆ ನಿರ್ಮಿಸಲು ಪ್ರತಿ ಫಲಾನುಭವಿಗೆ 2000 ರೂ. ಗಳಂತೆ ನೆರವು ನೀಡಲಾಗಿದೆ. ಗಿರಿಜನ ಯೋಜನೆಯನ್ವಯ ಹಿಂದೆ ನಿರ್ಮಿಸಲಾಗಿದ್ದ 69·80 ಹೆಕ್ಟೇರ್ ಮಾದರಿ ತೋಟವನ್ನು ಪಾಲನೆ ಮಾಡಲಾಗಿದೆ. ಹಾಗೂ 25 ಫಲಾನುಭವಿಗಳಿಗೆ ತಲಾ 1 ಎಕರೆಯಲ್ಲಿ ತೆಂಗಿನತೋಟವನ್ನು ನಿರ್ಮಿಸಿಕೊಡಲಾಗಿದೆ. ತೋಟಗಾರಿಕೆಯಲ್ಲಿ 4 ಜನ ಅಭ್ಯರ್ಥಿಗಳಿಗೆ 10 ತಿಂಗಳ ಅವಧಿಯ ತೋಟಗಾರಿಕೆ ತರಬೇತಿಯನ್ನು ನೀಡಲಾಗಿದೆ.

ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆಯಲ್ಲಿ 71,000 ಸಸ್ಯಗಳನ್ನು ಉತ್ಪಾದಿಸಿ 320 ಹೆಕ್ಟೇರ್ ಪ್ರದೇಶದಲ್ಲಿ ನೆಟ್ಟು ಅಭಿವೃದ್ಧಿಪಡಿಸಲಾಗುತ್ತಿದೆ. ರಾಷ್ಟ್ರೀಯ ಜಲಾನಯನ ಯೋಜನೆಯಲ್ಲಿ 6 ಜಲಾನಯನ ಪ್ರದೇಶಗಳಲ್ಲಿ ಗಿಡಗಳನ್ನು ರೈತರಿಗೆ ವಿತರಿಸಿ ಗಿಡಗಳನ್ನು ನೆಡಿಸಿ ಪ್ರದೇಶ ಅಭಿವೃದ್ಧಿಪಡಿಸಲಾಗಿದೆ.

## 14. ರೇಷ್ಮೆ SER

### 1989–90ನೇ ಸಾಲಿನ ಮೈಸೂರು ಜಿಲ್ಲೆಯ ರೇಷ್ಮೆ ಇಲಾಖೆಯ ವಾರ್ಷಿಕ ಆಡಳಿತ ವರದಿ

ಮೈಸೂರು ರೇಷ್ಮೆ ಎಲ್ಲೆಡೆ ಪ್ರಸಿದ್ಧ. ಜಿಲ್ಲೆಯ ಬಹುಮುಖ್ಯ ಕೈಗಾರಿಕೆಯಾಗಿರುವ ರೇಷ್ಮೆ ಉದ್ಯಮವು ಗ್ರಾಮೀಣಭಾಗದ ಜನರಿಗೆ ಅತ್ಯಲ್ಪ ಕಾಲದಲ್ಲಿ ಹೆಚ್ಚು ಆದಾಯ ತರುವ ಉದ್ಯಮವಾಗಿದೆ. ಜಿಲ್ಲೆಯಲ್ಲಿ ಹಿಪ್ಪುನೇರಳೆ ಬೇಸಾಯ, ರೇಷ್ಮೆ ಹುಳು ಸಾಕಣಿಕೆ ಹಾಗೂ ರೇಷ್ಮೆ ಕೈಗಾರಿಕೆಗೆ ಬೇಕಾದ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಲಾಗಿದೆ.

1989–90ನೇ ಸಾಲಿಗೆ ಜಿಲ್ಲಾ ಘಟಕ ಯೋಜನೆಯಡಿಯಲ್ಲಿ ಒಟ್ಟು 120·30 ಲಕ್ಷ ರೂ. ಗಳನ್ನು ಯೋಜನೆಯಲ್ಲೂ ಹಾಗೂ 13·82 ಲಕ್ಷ ರೂ. ಗಳನ್ನು ಯೋಜನೇತರದಲ್ಲಿ ಈ ಇಲಾಖೆಗೆ ನಿಗದಿಪಡಿಸಲಾಗಿದೆ.

1989–90ನೇ ಸಾಲಿನ ಮಾರ್ಚ್ 90ರವರೆಗೆ 133·29 ಲಕ್ಷ ರೂ. ಗಳ ಹಣವನ್ನು ಯೋಜನೆಯಲ್ಲಿ ಮತ್ತು 13·24 ಲಕ್ಷ ರೂ. ಗಳ ಹಣವನ್ನು ಯೋಜನೇತರದಲ್ಲಿ ಖರ್ಚು ಮಾಡಲಾಗಿದೆ.

ಜಿಲ್ಲೆಯಲ್ಲಿ 1,36,416 ಎಕರೆಗಳಲ್ಲಿ ಹಿಪ್ಪುನೇರಳೆ ಬೆಳೆಯಲಾಗುತ್ತಿದ್ದು, 80,803 ರೈತ ಕುಟುಂಬಗಳು ಹಿಪ್ಪುನೇರಳೆ ಬೆಳೆಯುವುದರಲ್ಲಿ ಹಾಗೂ ರೇಷ್ಮೆ ಹುಳು ಸಾಕಾಣಿಕೆಯಲ್ಲಿ ನಿರತರಾಗಿದ್ದಾರೆ.

ಜಿಲ್ಲೆಯಲ್ಲಿ ಒಟ್ಟು 273 ಬಿತ್ತನೆ ಕೋಠಿಗಳಿದ್ದು ಅವುಗಳಲ್ಲಿ 261 ಬಿತ್ತನೆ ಕೋಠಿಗಳು ಖಾಸಗಿಯಾಗಿದ್ದು ಉಳಿದ 12 ಬಿತ್ತನೆ ಕೋಠಿಗಳು ಸರ್ಕಾರದ್ದಾಗಿರುತ್ತದೆ.

ಜಿಲ್ಲೆಯಲ್ಲಿ ಗ್ರಾಮಾಂತರ ಪ್ರದೇಶದಲ್ಲಿ ಒಟ್ಟು 267 ಚಾಕಿ ಸಕಾಣಿಕಾ ಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ಇವುಗಳಿಗೆ ತಾಂತ್ರಿಕ ಸೇವೆ ಒದಗಿಸಲು 27 ತಾಂತ್ರಿಕ ಸೇವಾ ಕೇಂದ್ರಗಳನ್ನು ನಡೆಸಲಾಗುತ್ತಿದೆ.

1989–90ನೇ ಸಾಲಿನಲ್ಲಿ ಒಟ್ಟು 14,045 ಮೆಟ್ರಿಕ್ ಟನ್ ರೇಷ್ಮೆ ಗೂಡು ಉತ್ಪಾದಿಸಲಾಗಿದ್ದು ಒಟ್ಟು 1,478·3 ಮೆಟ್ರಿಕ್ ಟನ್ ಕಚ್ಚಾ ರೇಷ್ಮೆ ಉತ್ಪಾದನೆ ಮಾಡಲಾಗಿದೆ.

ವಿಶೇಷ ಘಟಕ ಯೋಜನೆ ಮತ್ತು ಗಿರಿಜನ ಉಪ ಯೋಜನೆಯಲ್ಲಿ ಹರಿಜನ ಮತ್ತು ಗಿರಿಜನ ರೈತರಿಗೆ ರೇಷ್ಮೆ ಕೃಷಿಗೆ ಬೇಕಾದ ಸಲಕರಣೆ ಒದಗಿಸುವುದರೊಂದಿಗೆ ಕ್ರಮವಾಗಿ 4·07 ಲಕ್ಷ ರೂ. ಮತ್ತು 4·24 ಲಕ್ಷ ರೂ.ಗಳನ್ನು ಖರ್ಚು ಮಾಡಲಾಗಿದೆ. ಈ ಯೋಜನೆಗಳಲ್ಲಿ 192 ಹರಿಜನರ ಮತ್ತು 35 ಗಿರಿಜನ ಫಲಾನುಭವಿಗಳಿಗೆ ಸಲಕರಣೆ ಒದಗಿಸಿ ಸೌಲಭ್ಯ ಕಲ್ಪಿಸಲಾಗಿದೆ.

## 15. ಪಶುಪಾಲನೆ

### ಮೈಸೂರು ಜಿಲ್ಲೆಯಲ್ಲಿ ಪಶುಸಂಗೋಪನೆ

ಜಿಲ್ಲೆಯಲ್ಲಿನ ಗ್ರಾಮೀಣ ರೈತರ ಬೇಸಾಯಕ್ಕೆ ಬಹು ಮುಖ್ಯವಾದ ಆಧಾರ ಪಶು ಸಂಪತ್ತು. ರೈತರ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಹಾಲು ಉತ್ಪಾದನೆಯನ್ನು ಗುರಿಯಾಗಿಟ್ಟುಕೊಂಡು ಇಲಾಖೆಯಲ್ಲಿ ಹಲವಾರು ಯೋಜನೆಗಳನ್ನು ಕೈಗೊಳ್ಳಲಾಗಿದೆ. 1989-90ನೇ ಸಾಲಿನಲ್ಲಿ ಇಲಾಖಾ ಕಾರ್ಯಕ್ರಮಗಳಿಗೆ ಯೋಜನೆಯಡಿಯಲ್ಲಿ 14·16 ಲಕ್ಷ ರೂಪಾಯಿಗಳನ್ನೂ ಹಾಗೂ ಯೋಜನೇತರದಡಿಯಲ್ಲಿ 106·21 ಲಕ್ಷ ರೂಪಾಯಿಗಳನ್ನೂ ನೀಡಲಾಗಿದೆ. ಈ ಇಲಾಖೆಯ ಕಾರ್ಯಕ್ರಮಗಳ ಮುಖ್ಯ ಉದ್ದೇಶಗಳು ಜಾನುವಾರು ತಳಿಗಳ ಸುಧಾರಣೆ ಹಾಗೂ ಅಧಿಕ ಉತ್ಪತ್ತಿಗೆ ತಳಿ ಅಭಿವೃದ್ಧಿಯ ಕಾರ್ಯಕ್ರಮಗಳು, ಪಶುಸಂಪತ್ತಿನ ನಿರ್ವಹಣೆಗೆ ಉತ್ತಮ ಪಶು ಆರೋಗ್ಯ ಸೇವೆಯನ್ನು ಒದಗಿಸುವುದೇ ಆಗಿರುತ್ತದೆ.

1983ರ ಜಾನುವಾರು ಗಣತಿಯ ಪ್ರಕಾರ ಜಿಲ್ಲೆಯಲ್ಲಿ ಒಟ್ಟು 17,53,472 ಜಾನುವಾರುಗಳು ಹಾಗೂ 10,96,290 ಕುಕ್ಕುಟಗಳಿವೆ. 1989–90ನೇ ಸಾಲಿನಲ್ಲಿ ನೂತನವಾಗಿ ಪ್ರಾರಂಭಿಸಿದ 15 ಗ್ರಾಮೀಣ ಪಶುವೈದ್ಯ ಶಾಲೆಗಳು ಹಾಗೂ ಮೇಲ್ದರ್ಜೆಗೇರಿಸಿದ 5 ಪಶುವೈದ್ಯಶಾಲೆಗಳೂ ಸೇರಿದಂತೆ ಜಿಲ್ಲೆಯಲ್ಲಿ 2 ಜಿಲ್ಲಾ ಮಟ್ಟದ ಪಶುವೈದ್ಯ ಆಸ್ಪತ್ರೆಗಳು, 37 ತಾಲ್ಲೋಕುಮಟ್ಟದ ಪಶುವೈದ್ಯಶಾಲೆಗಳು, 75 ಗ್ರಾಮಾಂತರ ಪಶುವೈದ್ಯಶಾಲೆಗಳು, 4 ಪ್ರಧಾನ ಗ್ರಾಮ ಯೋಜನೆ ಮುಖ್ಯ ಕೇಂದ್ರಗಳೂ, 24 ಉಪ ಕೇಂದ್ರಗಳು ಹಾಗೂ 22 ಇನ್ನಿತರ ಸಂಸ್ಥೆಗಳು ಪಶುವೈದ್ಯ ಸೇವೆಯಲ್ಲಿ ತೊಡಗಿವೆ. 10 ಸಂಚಾರಿ ಪಶುವೈದ್ಯ ಚಿಕಿತ್ಸಾಲಯಗಳು ಯೋಜನೆಯಡಿಯಲ್ಲಿ ಹಾಗೂ 1 ಸಂಚಾರಿ ಪಶುವೈದ್ಯ ಚಿಕಿತ್ಸಾಲಯ ಯೋಜನೇತರದಡಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ.

1989–90ನೇ ಸಾಲಿನಲ್ಲಿ 4,07,740 ಜಾನುವಾರುಗಳಿಗೆ ಚಿಕಿತ್ಸೆ ನೀಡಲಾಗಿದ್ದು, 25,485 ಜಾನುವಾರುಗಳಿಗೆ ಕಸಿ ಮಾಡಿದೆ. 1,03,313 ಜಾನುವಾರುಗಳಿಗೆ ಜಂತು ನಿವಾರಕ ಔಷಧಿಯನ್ನು ನೀಡಲಾಗಿದೆ. 3,146 ಶಸ್ತ್ರ ಚಿಕಿತ್ಸೆಮಾಡಲಾಗಿದೆ. ರೋಗ ನಿರೋಧಕ ಕ್ರಮವಾಗಿ 4,12,672 ರಾಸುಗಳಿಗೆ ದೊಡ್ಡರೋಗ ಇದರ ವಿರುದ್ಧ ಲಸಿಕೆ ಹಾಕಲಾಗಿದೆ. ಕೊಕ್ಕರೇ ರೋಗದ ವಿರುದ್ಧ 2,54,000 ಕೋಳಿಗಳಿಗೆ ಲಸಿಕೆ ಹಾಕಿದ್ದು ಇದರ ಜೊತೆಗೆ ಚಪ್ಪೆರೋಗ, ಗಳಲೇ ರೋಗ, ಕಾಲು ಬಾಯಿ ಜ್ವರ, ಕುರಿಗಳಲ್ಲಿ ಕರುಳುಬೇನೆ, ನರಡೀ ರೋಗ ಹಾಗೂ ರೇಬೀಸ್ ರೋಗದ ವಿರುದ್ದ ಚುಚ್ಚುಮದ್ದನ್ನು ಹಾಕಲಾಗಿದೆ (4,46,539 ಜಾನುವಾರುಗಳಿಗೆ.)

ಸುಧಾರಿತ ತಳಿಯ ಹಸುಗಳಿಂದ ಮಾತ್ರ ಹಾಲು ಉತ್ಪಾದನೆಯನ್ನು ಹೆಚ್ಚಿಸಲು ಸಾಧ್ಯವಾದ್ದರಿಂದ ಹೆಚ್ಚಿನ ಸಂಖ್ಯೆಯಲ್ಲಿ ಕೃತಕಗರ್ಭಧಾರಣೆ ಮಾಡಿ ತಳಿ ಅಭಿವೃದ್ಧಿ ಮಾಡಲಾಗಿದೆ. 1990ರ ಮಾರ್ಚ್ ಅಂತ್ಯದವರೆಗೆ 81,069 ರಾಸುಗಳಿಗೆ ಕೃತಕ ಗರ್ಭಧಾರಣೆ ಮಾಡಿದ್ದು 25,035 ರಾಸುಗಳಲ್ಲಿ ಫಲ ನಿಂತು 13,508 ಕರುಗಳು ಹುಟ್ಟಿರುತ್ತವೆ. ಇದರಲ್ಲಿ ಹೆಣ್ಣು ಕರುಗಳು 6,671 ಮತ್ತು ಗಂಡು ಕರುಗಳು 6,837. ಉತ್ಪಾದನೆಯಾದ ಹಾಲಿಗೆ ಮತ್ತ ಜಿಲ್ಲೆಯಲ್ಲಿ ವ್ಯವಸ್ಥಿತವಾದ ಮಾರುಕಟ್ಟೆ ಇದ್ದು ಈ ಸಾಲಿನಲ್ಲಿ ಪ್ರತಿ ದಿನ ಸರಾಸರಿ 1,00,315 ಲೀಟರ್ ಹಾಲು ಶೇಖರಣೆ ಯಾಗಿದ್ದು ಸರಾಸರಿ ಪ್ರತಿದಿನ 1,00,108 ಲೀಟರ್ ಹಾಲು ಮಾರಾಟ ಮಾಡಿರುತ್ತಾರೆ.

ಈ ಸಾಲಿನಲ್ಲಿ ರೈತರ ಸ್ವಂತ ಜಮೀನಿನಲ್ಲಿ 278·45 ಹೆಕ್ಟೇರ್ ಪ್ರದೇಶಗಳಲ್ಲಿ ಸುಧಾರಿತ ತಳಿಯ ಹುಲ್ಲು ಬೆಳೆಸಲು ಅಭಿವೃದ್ಧಿಪಡಿಸಲಾಗಿದೆ.

1989–90ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆ ಯಡಿಯಲ್ಲಿ 31.60 ಲಕ್ಷರೂ. ಗಳನ್ನು ಒದಗಿಸಲಾಗಿದ್ದು 234 ಹಸು ಘಟಕಗಳು, 156 ಎಮ್ಮೆ ಘಟಕಗಳು ಹಾಗೂ 390 ಕುರಿ–ಆಡು ಘಟಕಗಳನ್ನು ಆಯ್ದ ಫಲಾನುಭವಿಗಳಿಗೆ ಒದಗಿಸಲು ಯೋಜಿಸಲಾಗಿದೆ.

ಗಿರಿಜನ ಉಪಯೋಜನೆ, ಇದರ ಅಡಿಯಲ್ಲಿ 12·61 ಲಕ್ಷಗಳನ್ನು ಒದಗಿಸಿದ್ದು ಒಟ್ಟು 358 ಆಯ್ದ ಫಲಾನುಭವಿಗಳಿಗೆ ಸವಲತ್ತುಗಳನ್ನು ಒದಗಿಸಲು ಯೋಜಿಸಲಾಗಿದೆ. ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಈ ಯೋಜನೆಯನ್ನು ಕಾರ್ಯಗತಗೊಳಿಸಲು ಬೇಕಾಗಿರುವ ಅಂಚಿನ ಹಣ 4.88 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಿರುತ್ತಾರೆ. ಸವಲತ್ತುಗಳನ್ನು ಒದಗಿಸುವ ಕಾರ್ಯಕ್ರಮ ನಡೆಯುತ್ತಿರುತ್ತದೆ.

ವಿಶೇಷ ಜಾನುವಾರು ತಳಿ ಅಭಿವೃದ್ಧಿ ಯೋಜನೆ ಇದರ ಅಡಿಯಲ್ಲಿ 46 ಫಲಾನುಭವಿಗಳಿಗೆ ಕುರಿ ಘಟಕಗಳನ್ನು ನೀಡಲಾಗಿದೆ.

ಇದೇ ಸಾಲಿನಲ್ಲಿ ಮನೆ ಹಿತ್ತಲಿನಲ್ಲಿ ಕೋಳಿ ಸಾಕಾಣಿಕೆ ಯೋಜನೆಯಡಿಯಲ್ಲಿ 60 ಹೊಸ ಫಲಾನುಭವಿಗಳಿಗೆ ಮೊದಲನೇ ಕಂತಿನ 12 "ಗಿರಿರಾಜ" ಕೋಳಿಗಳನ್ನು ಹಾಗೂ 230 ಫಲಾನುಭವಿಗಳಿಗೆ ಎರಡನೇ ಕಂತಿನ 6 ಗಿರಿರಾಜ ಕೋಳಿಗಳನ್ನು ವಿತರಿಸಲಾಗಿದೆ.

ಗುಂಡ್ಲುಪೇಟೆ ತಾಲ್ಲೂಕಿನ ಬರ್ಗಿ ಗ್ರಾಮದ ಹತ್ತಿರ ಸ್ಥಾಪಿತವಾಗಿರುವ ಕಡಸು ಉತ್ಪಾದನಾ ಹಾಗೂ ರೈತರ ತರಬೇತಿ ಕೇಂದ್ರವು ಪೂರ್ಣ ಪ್ರಮಾಣದ ಕಾರ್ಯಾರಂಭ ಪ್ರಾರಂಭಿಸಿದ್ದು ಅಭಿವೃದ್ಧಿ ಪಥದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿದೆ.

## 16. ಮೀನುಗಾರಿಕೆ

ಮೈಸೂರು ಜಿಲ್ಲೆಯ ಒಳನಾಡು ಮೀನುಗಾರಿಕೆಯಲ್ಲಿ ಇತರೇ ಜಿಲ್ಲೆಗಳಿಗಿಂತಲೂ ಹೆಚ್ಚಿನ ಸಂಪನ್ಮೂಲಗಳನ್ನು ಹೊಂದಿದ್ದು ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದ ನಂತರ ಮೀನುಗಾರಿಕೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಆದ್ಯತೆಯ ಮೇರೆಗೆ ಕೈಗೊಳ್ಳಲಾಗಿದೆ. ಜಿಲ್ಲೆಯ ಹೆಚ್ಚಿನ ಕೆರೆಗಳನ್ನು ಮಂಡಲ ಪಂಚಾಯತಿಗಳಿಗೆ, ಮೀನುಗಾರಿಕೆ ಸಹಕಾರ ಸಂಘಗಳಿಗೆ ಹಾಗೂ ಮೀನುಗಾರಿಕೆ ತರಬೇತಿ ಪಡೆದ ಅಭ್ಯರ್ಥಿಗಳಿಗೆ ಗುತ್ತಿಗೆಗೆ ನೀಡಿ ಮೀನು ಕೃಷಿ ಕೈಗೊಳ್ಳುವುದರ ಮೂಲಕ ಅವರ ಆರ್ಥಿಕ ಸ್ಥಿತಿ ಉತ್ತಮ ಪಡಿಸುವುದಲ್ಲದೆ, ಹೆಚ್ಚಿನ ಪೌಷ್ಟಿಕ ಆಹಾರ ಉತ್ಪಾದನೆಯ ಉದ್ದೇಶವಾಗಿರುತ್ತದೆ.

1989–90ನೇ ಸಾಲಿನಲ್ಲಿ ಮೀನುಗಾರಿಕೆ ಯೋಜನಾ ಕಾರ್ಯಕ್ರಮಗಳಿಗೆ 10·45 ಲಕ್ಷ ರೂ.ಗಳನ್ನು ಮತ್ತು ಯೋಜನೇತರ ಕಾರ್ಯಕ್ರಮಗಳಿಗೆ 18·86 ಲಕ್ಷ ರೂ.ಗಳನ್ನು ನೀಡಲಾಗಿತ್ತು. ಇದರಲ್ಲಿ ಕ್ರಮವಾಗಿ ರೂ. 10·47 ಮತ್ತು 17·69 ಲಕ್ಷ ರೂ.ಗಳು ಖರ್ಚಾಗಿರುತ್ತದೆ. ಯೋಜನಾ ಕಾರ್ಯಕ್ರಮಗಳಲ್ಲಿ ಮುಖ್ಯವಾಗಿ ಕಬಿನಿ ಮತ್ತು ನುಗು ಕೇಂದ್ರಗಳಲ್ಲಿ 181 ಲಕ್ಷ ಅತೀ ಚಿಕ್ಕ ಮೀನುಮರಿಗಳನ್ನು ಉತ್ಪಾದಿಸಲಾಗಿದೆ.

ಜಿಲ್ಲಾದ್ಯಂತೆ ಮಂಡಲ ಪಂಚಾಯತಿಗಳು, ಮೀನುಗಾರಿಕೆ ಸಹಕಾರ ಸಂಘಗಳು ಮತ್ತು ವಿಶೇಷ ಘಟಕ ಯೋಜನೆಗಳಲ್ಲಿ ಒಟ್ಟು 192 ದೊಡ್ಡ ಕೆರೆಗಳನ್ನು ಗುತ್ತಿಗೆಗೆ ನೀಡಿದ್ದು ಮೀನು ಕೃಷಿಕರ ಅಭಿವೃದ್ಧಿ ಸಂಸ್ಥೆಯ ಮೂಲಕ 100 ಸಣ್ಣ ಕೆರೆಗಳನ್ನು ತರಬೇತಿ ಪಡೆದ ಅಭ್ಯರ್ಥಿಗಳಿಗೆ ಗುತ್ತಿಗೆಗೆ ನೀಡಿದ್ದು ಜಿಲ್ಲೆಯಲ್ಲಿ ಒಟ್ಟು 48·24 ಲಕ್ಷ ಮೀನುಮರಿಗಳನ್ನು ಬಿತ್ತನೆ ಮಾಡಲಾಗಿದೆ. ಇದರಿಂದಾಗಿ ಜಿಲ್ಲೆಯ ವಾರ್ಷಿಕ ಮೀನು ಉತ್ಪಾದನೆಯು ಸುಮಾರು 10 ಸಾವಿರ ಮೆಟ್ರಿಕ್ ಟನ್‌ಗಳಾಗಿರುತ್ತದೆ.

ಜಿಲ್ಲೆಯಲ್ಲಿ ಮೀನುಕೊಳ ನಿರ್ಮಾಣಕ್ಕೆ ಕೃಷಿಕರು ಆಸಕ್ತಿ ತೋರಿಸುತ್ತಲಿದ್ದು ಹೆಚ್ಚಿನ ಬೇಡಿಕೆ ಇರುತ್ತದೆ. ಪ್ರಸಕ್ತ ಸಾಲಿನಲ್ಲಿ 5 ಕೊಳಗಳ ನಿರ್ಮಾಣದ ಗುರಿಯನ್ನು ಸಾಧಿಸಲಾಗಿದೆ. ಈ ಕಾರ್ಯಕ್ರಮಕ್ಕೆ 1990–91ನೇ ಸಾಲಿನಲ್ಲಿ ಹೆಚ್ಚಿನ ಹಣವನ್ನು ನಿಗದಿ ಪಡಿಸಿದ್ದು ಇದರಿಂದಾಗಿ ಮಿಶ್ರ ಮತ್ಸ್ಯ ಪಾಲನೆಯನ್ನು ಪ್ರೋತ್ಸಾಹಿಸಿ ಜಿಲ್ಲೆಯ ಮೀನು ಉತ್ಪಾದನೆಯನ್ನು ಹೆಚ್ಚಿಸುವುದಲ್ಲದೆ ಕೃಷಿಕರು ಕಡಿಮೆ ಹೂಡಿಕೆ ಹಣದಿಂದ ಹೆಚ್ಚಿನ ಆದಾಯಗಳಿಸುವ ಉದ್ಯಮವನ್ನು ಕೈಗೊಂಡಂತಾಗುತ್ತದೆ.

ಮೀನುಮರಿ ಉತ್ಪಾದನಾ ಕೇಂದ್ರಗಳ ಮತ್ತು ತಾಲ್ಲೋಕಿನ ಮೀನುಮರಿ ಪಾಲನಾ ಕೇಂದ್ರಗಳ ಸಾಮರ್ಥ್ಯವನ್ನು ಉತ್ತಮ ಪಡಿಸಲು ಯೋಜನಾ ಕಾರ್ಯಕ್ರಮದಲ್ಲಿ ಕ್ರಮ ಕೈಗೊಂಡಿದ್ದು ಕಬಿನಿಯಲ್ಲಿಯ ಮೀನುಮರಿ ಉತ್ಪಾದನಾ ಕೇಂದ್ರದಲ್ಲಿ (ಇಂಡಸ್ಟ್ರಿಯಲ್ ಎಸ್ಟೇಟ್) ಆರು ದೊಡ್ಡ ಕೊಳಗಳನ್ನು 2·51 ಲಕ್ಷ ರೂ. ವೆಚ್ಚದಲ್ಲಿ ದುರಸ್ತಿ ಗೊಳಿಸಲಾಗಿದೆ. ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆ ಮತ್ತು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಕ್ರಮವಾಗಿ 6·00 ಲಕ್ಷ ರೂ. ಮತ್ತು 2·70 ಲಕ್ಷರೂ.ಗಳ ವೆಚ್ಚಗಳಲ್ಲಿ ಕಬಿನಿ ಕೇಂದ್ರ ಹಾಗೂ ಪಿರಿಯಾಪಟ್ಟಣದಲ್ಲಿ ಮೀನುಮರಿ ಪಾಲನೆ ಕೊಳಗಳನ್ನು ನಿರ್ಮಾಣ ಮಾಡಿದ್ದು ಮೀನುಮರಿ ಉತ್ಪಾದನಾ ಸಾಮರ್ಥ್ಯವನ್ನು ಉತ್ತಮಗೊಳಿಸಲಾಗಿದೆ. ಹಾಗೂ ತಾಲ್ಲೋಕಿನ ಎಲ್ಲಾ ಮೀನು ಪಾಲನಾ ಕೇಂದ್ರಗಳಿಗೆ ಅಗತ್ಯವಾದ ಉಪಕರಣಗಳನ್ನು ಒಪಗಿಸಲಾಗಿದೆ.

ಕಾವೇರಿ ಜಲಾನಯನ ಅಭಿವೃದ್ಧಿ ಪ್ರಾಧಿಕಾರ ಮೈಸೂರು ರವರು 2·50 ಲಕ್ಷ ರೂ. ಅನುದಾನ ನೀಡಿದ್ದು ಕಬಿನಿ ಕೇಂದ್ರದ ಮೀನುಮರಿ ಉತ್ಪಾದನಾ ಸಾಮರ್ಥ್ಯವನ್ನು ಹೆಚ್ಚಿಸಲು ಚೈನಾ ಮಾದರಿಯ ಹ್ಯಾಚರಿಯನ್ನು ನಿರ್ಮಿಸಲು ಕ್ರಮ ಕೈಗೊಳ್ಳಲಾಗಿದೆ.

ಜಿಲ್ಲೆಯ ಮೀನುಗಾರಿಕೆ ಸಹಕಾರ ಸಂಘಗಳಿಗೆ ಷೇರು ಬಂಡವಾಳ 20 ಸಾವಿರ ರೂ, ಮೀನು ಹಿಡಿಯುವ ಉಪಕರಣಗಳ ಸಾಲ 10 ಸಾವಿರ ಮತ್ತು ಸಂಘದ ಕಾರ್ಯದರ್ಶಿಗೆ ಸಹಕಾರ ಸಂಘಗಳ ಕಾರ್ಯನಿರ್ವಹಣೆಗಾಗಿ ಆಡಳಿತಾತ್ಮಕ ಸಹಾಯಧನ 5000–00 ರೂ.ಗಳನ್ನು ನೀಡಲಾಗಿದೆ.

ವಿಶೇಷ ಘಟಕ ಯೋಜನೆಯಲ್ಲಿ ಒಟ್ಟು 0·57 ಲಕ್ಷ ರೂ.ಗಳ ವೆಚ್ಚದಲ್ಲಿ 20 ಜನ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳಿಗೆ ಮೀನುಗಾರಿಕೆ ತರಬೇತಿ ನೀಡಿ ಮೀನು ಕೃಷಿ ಕೈಗೊಳ್ಳಲು ಕೆರೆಗಳನ್ನು ಗುತ್ತಿಗೆಗೆ ನೀಡಿ ಸಹಾಯಧನ ನೀಡಲಾಗಿದೆ. ಅಲ್ಲದೆ 10 ಜನರಿಗೆ ಮೀನು ಹಿಡಿಯುವ ಉಪಕರಣ ಕೊಳ್ಳಲು ಸಹಾಯಧನ ನೀಡಲಾಗಿದೆ.

ಗಿರಿಜನ ಉಪಯೋಜನೆಯಲ್ಲಿ ಕೊಳ್ಳೇಗಾಲ ತಾಲ್ಲೋಕಿನ ಗುಂಡಾಲ್ ಜಲಾಶಯದ ಬಳಿ ಇರುವ 20 ಜನ ಸೋಲಿಗ ಅಭ್ಯರ್ಥಿಗಳಿಗೆ ಮೀನುಗಾರಿಕೆ ತರಬೇತಿ ನೀಡಿ ಒಟ್ಟು 0·88 ಲಕ್ಷ ರೂ. ವೆಚ್ಚದಲ್ಲಿ ಗುಂಡಾಲ್ ಜಲಾಶಯವನ್ನು ಅಭಿವೃದ್ಧಿ ಪಡಿಸಿ ಅವರಿಗೆ ಜೀವನೋಪಾಯಕ್ಕೆ ಅವಕಾಶ ಮಾಡಿಕೊಡಲಾಗಿದೆ.

ಮೀನುಗಾರಿಕೆ ಕಾರ್ಯಕ್ರಮಗಳಿಗೆ 1990ರ ಮಾರ್ಚ್ ಅಂತ್ಯದವರೆಗೆ ಒಟ್ಟು 28·16 ಲಕ್ಷ ರೂ. (ಯೋಜನೇತರ ಅನುದಾನ ಸೇರಿ) ಖರ್ಚಾಗಿರುತ್ತದೆ. ಮೀನುಗಾರಿಕೆಯಲ್ಲಿ ಕೆರೆಗಳ ಗುತ್ತಿಗೆ ಹಣ, ಮೀನುಮರಿಗಳ ಮಾರಾಟ, ಮೀನು ಹಿಡಿಯುವ ಪರವಾನಿಗೆ ಮುಂತಾದುವುಗಳಿಂದ ಒಟ್ಟು 4·68 ಲಕ್ಷ ರೂ.ಗಳ ಆದಾಯದ ಗುರಿಯನ್ನು ಹೊಂದಿದ್ದು 5·95 ಲಕ್ಷರೂಗಳ ಆದಾಯ ಬಂದಿರುತ್ತದೆ. ಒಟ್ಟಾರೇ ಜಿಲ್ಲೆಯ ಮೀನುಗಾರಿಕೆ ಯೋಜನೆ ಮತ್ತು ಯೋಜನೇತರ ಎಲ್ಲಾ ಕಾರ್ಯಕ್ರಮಗಳಲ್ಲಿ ನಿಗದಿಪಡಿಸಿದ ಗುರಿಯನ್ನು ಸಾಧಿಸಿ ಅನುಷ್ಠಾನ ಗೊಳಿಸಲಾಗಿದೆ.

## 17. ಸಾಮಾಜಿಕ ಅರಣ್ಯ

1) ಅರಣ್ಯಾಭಿವೃದ್ಧಿಗಾಗಿ ಸರಕಾರವು ರೂಪಿಸಿದ ಅನೇಕ ಹೊಸ ಯೋಜನೆಗಳಲ್ಲಿ ಸಾಮಾಜಿಕ ಅರಣ್ಯ ಯೋಜನೆಯು ಅತೀ ಮುಖ್ಯವಾದುದು. ಈ ಯೋಜನೆಯು ಅನುಷ್ಠಾನಕ್ಕಾಗಿ 1986ನೇ ಸಾಲಿನಲ್ಲಿ ರಾಜ್ಯದ ಹೆಚ್ಚಿನ ಜಿಲ್ಲೆಗಳಲ್ಲಿ ಹೊಸದಾಗಿ ವಿಭಾಗ ಮಟ್ಟದ ಕಛೇರಿಗಳನ್ನು ಸ್ಥಾಪಿಸಲಾಯಿತು. ಇವುಗಳಲ್ಲಿ ಮೈಸೂರು ಸಾಮಾಜಿಕ ಅರಣ್ಯ ವಿಭಾಗವೂ ಒಂದು. 1987ನೇ ಸಾಲಿನಿಂದೀಚೆಗೆ ಸಾಮಾಜಿಕ ಅರಣ್ಯ ವಿಭಾಗಗಳು ಜಿಲ್ಲಾ ಪರಿಷತ್ತಿನ ಆಡಳಿತ ವ್ಯಾಪ್ತಿಗೆ ಒಳಪಟ್ಟಿರುತ್ತವೆ.

2) ಸಾಮಾಜಿಕ ಅರಣ್ಯ ಯೋಜನೆಯ ಮುಖ್ಯ ಉದ್ದೇಶ:– ಸಾಂಪ್ರದಾಯಕ ರೀತಿಯ ರಕ್ಷಿತಾರಣ್ಯ ಅಭಿವೃದ್ಧಿಗಿಂತ ಭಿನ್ನವಾದ, ಇತರ ಸರಕಾರಿ ಸ್ಥಳಗಳು ಮತ್ತು ಖಾಸಗಿ ಭೂಮಿಗಳಲ್ಲಿ ಜನತೆಯ ಸಹಭಾಗಿತ್ವದೊಂದಿಗೆ ಗಿಡ ಮರಗಳನ್ನು ಬೆಳೆಸುವುದರೊಂದಿಗೆ ಗ್ರಾಮಾಂತರ ಜನತೆಯ ಪ್ರಾಥಮಿಕ ಅಗತ್ಯಗಳಲ್ಲೊಂದಾದ ಉರುವಲಿಗೆ ಸೌದೆ ಪೂರೈಸುವುದು, ರೈತರು ಮತ್ತಿತರ ಗ್ರಾಮೀಣ ಜನತೆಯಿಂದ ವಿಕೇಂದ್ರೀಕೃತ ಸಸ್ಯ ಕ್ಷೇತ್ರಗಳನ್ನು ಬೆಳೆಸಿ ತನ್ಮೂಲಕ ಗ್ರಾಮಾಂತರ ಪ್ರದೇಶದ ಜನತೆಗೆ ಉದ್ಯೋಗ ದೊರಕಿಸುವುದರೊಂದಿಗೆ ಅವರ ಆರ್ಥಿಕ ಮಟ್ಟವನ್ನು ಸುಧಾರಿಸುವುದು ಮತ್ತು ಮುಖ್ಯವಾಗಿ ಗ್ರಾಮೀಣ ಜನತೆಗೆ ಗಿಡ ಮರಗಳ ಪ್ರಾಮುಖ್ಯತೆಯ ಬಗ್ಗೆ ತಿಳುವಳಿಕೆ ಕೊಡುವುದಾಗಿರುತ್ತದೆ.

3) ಸಾಮಾಜಿಕ ಅರಣ್ಯ ವಿಭಾಗವು ಅಸ್ತಿತ್ವಕ್ಕೆ ಬಂದಂದಿನಿಂದಲೂ ಅದರದೇ ಆದ ಖಾಯಂ ಸಸ್ಯಕ್ಷೇತ್ರಗಳಿಲ್ಲದೆ, ಮೊದಲ ಎರಡು ವರ್ಷಗಳಲ್ಲಿ ಇಲಾಖೆಗೆ ನೆಡಲು ಬೇಕಾದ ಉತ್ತಮ ಗಿಡಗಳು ಸಿಗದೆ ತೊಂದರೆ ಪಡುವಂತಾಗುತ್ತಿತ್ತು. 1989–90ನೇ ಸಾಲಿನಲ್ಲಿ ಜಿಲ್ಲೆಯ ಎಲ್ಲ ತಾಲ್ಲೋಕುಗಳಲ್ಲೂ ಖಾಯಂ ಸಸ್ಯಕ್ಷೇತ್ರಗಳನ್ನು ನಿರ್ಮಿಸಿ ಹಲವು ಕಡೆ ಗಿಡಗಳಿಗೆ ನೀರುಣಿಸಲು ಪಂಪುಸೆಟ್‌ಗಳನ್ನು ಖರೀದಿಸಿ ಉತ್ತಮ ಮಟ್ಟದ ಗಿಡಗಳನ್ನು ಬೆಳೆಸಲಾಗಿದೆ.

4) ವಿಭಾಗದ ಮತ್ತು ವಲಯ ಕಛೇರಿಗಳಲ್ಲಿ ಅತ್ಯಗತ್ಯವಾಗಿ ಬೇಕಾದ ಪೀಠೋಪಕರಣಗಳಿಗೂ ಕೊರತೆ ಇದ್ದುದರಿಂದ, 1989–90ನೇ ಸಾಲಿನಲ್ಲಿ ಅಗತ್ಯವಿರುವ ಪೀಠೋಪಕರಣಗಳನ್ನು ಕೊಂಡು ಕಛೇರಿ ಕೆಲಸಗಳು ಸುಗಮವಾಗಿ ಸಾಗುವಂತಾಗಿದೆ.

5) ಸಾಮಾಜಿಕ ಅರಣ್ಯದ ಚಟುವಟಿಕೆಗಳು ಗ್ರಾಮಾಂತರ ಜನತೆಗೆ ಸೀಮಿತವಾಗಿದ್ದು, ಅವರಿಗೆ ಇದರ ಮಹತ್ವದ ಅರಿವು ಮೂಡಿಸಲು ಪ್ರಚಾರ ಕಾರ್ಯವೂ ಒಂದು ಮುಖ್ಯ ಮಾಧ್ಯಮವಾಗಿದ್ದು, ಇದಕ್ಕಾಗಿ ಒಂದು ಪ್ರೊಜೆಕ್ಟರನ್ನು ಕೊಂಡು ಹಲವಾರು ಗ್ರಾಮಗಳಲ್ಲಿ ಈ ಬಗ್ಗೆ ಚಿತ್ರಪ್ರದರ್ಶನವನ್ನು ಏರ್ಪಡಿಸಿ, ಜನತೆಗೆ ಗಿಡಗಳನ್ನು ನೆಡುವಲ್ಲಿ ಹೆಚ್ಚಿನ ಆಸಕ್ತಿ ಮೂಡುವಂತೆ ಪ್ರೇರೇಪಿಸಲಾಗಿದೆ.

ಇದಲ್ಲದೇ, ಸಂಘ ಸಂಸ್ಥೆಗಳ ಮತ್ತು ಮಂಡಲ ಪಂಚಾಯತಿ ಸದಸ್ಯರುಗಳಿಗೆ ಬೆಂಗಳೂರಿನ ಬಳಿ ಕಾಡುಗೋಡಿ ತರಬೇತಿ ಕೇಂದ್ರದಲ್ಲಿ ಸಾಮಾಜಿಕ ಅರಣ್ಯ ಅಭಿವೃದ್ಧಿ ಬಗ್ಗೆ ತರಬೇತಿಯನ್ನು ನೀಡಲಾಗಿದೆ. ಸಾಕಷ್ಟು ಜನ ಸಂಪರ್ಕ ಸಭೆಗಳನ್ನು ನಡೆಸಿ, ಜನತೆಯ ಬೇಡಿಕೆಗಳಿಗೆ ಅನುಸಾರವಾಗಿ ಇಲಾಖೆಯಿಂದ ಸೌಲಭ್ಯಗಳ ಒದಗಿಸುವಿಕೆ ಕುರಿತಾಗಿ ಪ್ರಚುರ ಪಡಿಸಲಾಗಿದೆ.

6) ಸಾಮಾಜಿಕ ಅರಣ್ಯ ಬೆಳೆಸುವುದರ ಮಹತ್ವ, ಉಪಯೋಗಗಳೇ ಮುಂತಾದ ವಿವರಗಳನ್ನು ಆಕಾಶವಾಣಿ ನಿಲಯ, ಮೈಸೂರು ಇಲ್ಲಿಂದ ಕೃಷಿ ರಂಗ ಕಾರ್ಯಕ್ರಮದಲ್ಲಿ ಆಗಿಂದಾಗ್ಗೆ ಪ್ರಚಾರಮಾಡಲಾಗುತ್ತದೆ. ಇದರಿಂದಾಗಿ ಹೆಚ್ಚಿನ ಪ್ರಚಾರ ನೀಡಿದಂತಾಗಿದೆ.

7) 1989–90ರ ದಸರಾ ವಸ್ತು ಪ್ರದರ್ಶನದಲ್ಲಿ ಜಿಲ್ಲಾ ಪರಿಷತ್ ವತಿಯಿಂದ ಈ ವಿಭಾಗವೂ ಭಾಗವಹಿಸಿದ್ದು, ಸಾಮಾಜಿಕ ಅರಣ್ಯ ನಿರ್ಮಾಣದ ಬಗ್ಗೆ ಸಾಕಷ್ಟು ಪ್ರಚಾರ ಮಾಡಲಾಗಿದೆ. ದಸರಾ ಮೆರವಣಿಗೆಯಲ್ಲಿ ಸ್ತಬ್ಧ ಚಿತ್ರವನ್ನು ಸಾದರ ಪಡಿಸಲಾಗಿದೆ.

ಪ್ರಕೃತಿಯನ್ನು ಸದಾ ಹಸಿರಾಗಿಸುವ ಸಾಮಾಜಿಕ ಅರಣ್ಯ ಬೆಳವಣಿಗೆಗೆ ಜಿಲ್ಲಾ ಪರಿಷತ್ತಿನಿಂದ 1989–90ರಲ್ಲಿ ಕೊಡಲ್ಪಟ್ಟ ಅನುದಾನ, ಮಾಡಿರುವ ಖರ್ಚು ವೆಚ್ಚಗಳು ಮತ್ತು ಸಾಧನೆಗಳನ್ನು ಕೆಳಗಡೆ ಕೊಡಲಾಗಿದೆ. (ಇದು ಇತರ ಅರಣ್ಯ ವಿಭಾಗಗಳನ್ನೂ ಒಳಗೊಂಡಿದೆ).

| ಕ್ರಮ ಸಂಖ್ಯೆ | ಯೋಜನೆಯ ಹೆಸರು | ಭೌತಿಕ (ಹೆಕ್ಟೇರುಗಳಲ್ಲಿ) | | ಆರ್ಥಿಕ (ರೂ. ಲಕ್ಷಗಳಲ್ಲಿ) | |
|---|---|---|---|---|---|
| | | ಗುರಿ | ಸಾಧನೆ | ಗುರಿ | ಸಾಧನೆ |
| 1. | ವಿಶ್ವಬ್ಯಾಂಕ್ ನೆರವಿನ ಸಾಮಾಜಿಕ ಅರಣ್ಯ ಯೋಜನೆ | 250 | 181 | 48·310 | 42·838 |
| 2. | ಎಸ್. ಎಸ್. ಎಫ್. ನೆಡುತೋಪು ಬೆಳೆಸುವುದು | 471 | 619·1 | 26·540 | 25·683 |
| 3. | ಜವಾಹರ್ ರೋಜ್‌ಗಾರ್ ಯೋಜನೆ | 933 | 934 | 45·724 | 42·688 |
| 4. | ಪಶ್ಚಿಮ ಘಟ್ಟಗಳ ಅಭಿವೃದ್ಧಿ | 303 | 254 | 21·700 | 16·314 |
| 5. | ಎಸ್. ಎಸ್. ಎಫ್. ವಿಕೇಂದ್ರೀಕೃತ ಸಸ್ಯ ಕ್ಷೇತ್ರಗಳು | 19·251 ಲಕ್ಷ ಸಸಿಗಳು | 32·761 ಲಕ್ಷ ಸಸಿಗಳು | 6·000 | 6·585 |
| 6. | ಡ್ಯಾನಿಡಾ ನೆರವಿನ ಶಾಲಾ ಸಸ್ಯಕ್ಷೇತ್ರ | 5ಕೊಳವೆ | 5 ಕೊಳವೆ | 5·000 | 4·374 |

## 18. ಸಹಕಾರ

1. ಸರ್ಕಾರವು ರೂಪಿಸಿರುವ ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಹಕಾರಿ ರಂಗವು ಪ್ರಮುಖ ಪಾತ್ರವನ್ನು ವಹಿಸುತ್ತಲಿದೆ. ಕೃಷಿಕರೇ ಅಧಿಕವಾಗಿರುವ ಗ್ರಾಮೀಣ ಕುಟುಂಬಗಳಿಗೆ ಕೃಷಿ ಕಾರ್ಯಕ್ರಮಗಳ ನಿರ್ವಹಣೆಗಾಗಿ ಅಲ್ಪಾವಧಿ, ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ನೀಡುತ್ತಿದ್ದು ಬಳಕೆದಾರರ ಸಹಕಾರ ಸಂಘಗಳು ಪಟ್ಟಣ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಅವಶ್ಯಕ ಪದಾರ್ಥಗಳನ್ನು ನಿಯಂತ್ರಿತ ಹಾಗೂ ಅನಿಯಂತ್ರಿತ ವಸ್ತುಗಳನ್ನು ಒದಗಿಸಲು ಅಮೂಲ್ಯ ಸೇವೆ ಸಲ್ಲಿಸುತ್ತಿದೆ.

2. 1989-90ನೇ ಸಾಲಿನಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು ಮತ್ತು ಪ್ರಾಥಮಿಕ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕುಗಳ ಮೂಲಕ ರೈತ ಸದಸ್ಯರಿಗೆ 44·00 ಲಕ್ಷ ರೂ. ಅಲ್ಪಾವಧಿ ಸಾಲ, 12·00 ಲಕ್ಷ ರೂ. ಮಧ್ಯಮಾವಧಿ ಸಾಲ ಮತ್ತು 153·00 ಲಕ್ಷ ರೂ.ಗಳು ದೀರ್ಘಾವಧಿ ಸಾಲ ವಿತರಣೆ ಮಾಡಲಾಗಿದೆ.

3. 1989–90ನೇ ಸಾಲಿನ ಆಯವ್ಯಯದಲ್ಲಿ ಸಹಕಾರ ಇಲಾಖೆಗೆ ಒಟ್ಟು 31·81 ಲಕ್ಷ ರೂ.ಗಳನ್ನು ವಿವಿಧ ಯೋಜನೆಯಡಿಯಲ್ಲಿ ಖರ್ಚು ಮಾಡಲು ಗುರಿ ನಿಗದಿಪಡಿಸಲಾಗಿದೆ. ಸದರಿ ವರ್ಷದಲ್ಲಿ ಯೋಜನೆಗಳಿಗೆ ನೀಡಿದ ಗುರಿಗೆ ಅನುಗುಣವಾಗಿ ಭೌತಿಕ ಮತ್ತು ಆರ್ಥಿಕ ಸಾಧನೆಗಳು ಈ ಕೆಳಕಂಡಂತಿವೆ.

| ಕ್ರಮ ಸಂಖ್ಯೆ | ಯೋಜನೆಗಳ ವಿವರ | ಫಲಾನುಭವಿಗಳ ಸಂಖ್ಯೆ | ಆರ್ಥಿಕ ಸಾಧನೆ ಲಕ್ಷ ರೂ. ಗಳಲ್ಲಿ |
|---|---|---|---|
| 1. | ಮಾರಾಟ ಸಹಕಾರ ಸಂಘಗಳಿಗೆ ಬಡ್ಡಿ ಸಹಾಯಧನ | 2 | 0·30 |
| 2. | ದುರ್ಬಲ ಬಳಕೆದಾರರ ಸಹಕಾರ ಸಂಘಗಳಿಗೆ ಬಡ್ಡಿರಹಿತ ಸಾಲ | 6 | 0·50 |
| 3. | ಮಹಿಳಾ ಸಹಕಾರ ಸಂಘಗಳಿಗೆ ಷೇರು ಸಹಾಯಧನ | 2 | 0·23 |
| 4. | ಪ್ರಾಥಮಿಕ ಮಾರಾಟ ಸಹಕಾರ ಸಂಘಗಳಿಗೆ ಷೇರು ಬಂಡವಾಳ | 2 | 0·50 |
| 5. | ಕೇಂದ್ರ ಸಗಟು ಮಾರಾಟ ಮಳಿಗೆಗಳಿಗೆ ಷೇರು ಬಂಡವಾಳ | 1 | 0·50 |
| | | | 2·03 |
| | **ಗಿರಿಜನ ಉಪಯೋಜನೆ** | | |
| 6. | ಖರೀದಿ ಮತ್ತು ಮಾರಾಟ ಘಟಕಗಳನ್ನು ತೆರೆಯುವುದು | 1 | 0·50 |
| 7. | ಗಿರಿಜನರನ್ನು ಲ್ಯಾಂಪ್ಸ್ ಸಂಘಗಳಲ್ಲಿ ಸದಸ್ಯರನ್ನಾಗಿ ನೊಂದಾಯಿಸುವ ಬಗ್ಗೆ | 225 ಜನರಿಗೆ | 0·05 |
| | | | 0·55 |
| | **ವಿಶೇಷ ಘಟಕ ಯೋಜನೆ** | | |
| 8 | ಪರಿಶಿಷ್ಟ ಜಾತಿ ಸದಸ್ಯರನ್ನು ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೊಂದಾಯಿಸುವುದು | 4508 ಜನರಿಗೆ | 0·49 |
| 9. | ಪರಿಶಿಷ್ಟ ಜಾತಿ ಸದಸ್ಯರು ಪಾವತಿಸಬೇಕಾದ ಹೆಚ್ಚುವರಿ ಷೇರಿಗೆ ಬಡ್ಡಿ ರಹಿತ ಸಾಲ | 263 ಜನರಿಗೆ | 0·37 |
| | | | 0.86 |
| | **ಕೇಂದ್ರ ಪುರಸ್ಕೃತ ಎನ್.ಸಿ.ಡಿ.ಸಿ. ಯೋಜನೆ** | | |
| 10. | ವಿದ್ಯಾರ್ಥಿ ಬಳಕೆದಾರರ ಸಹಕಾರ ಸಂಘಗಳಿಗೆ ನೆರವು | 1 | 0·15 |
| 11. | ಮಾರಾಟ ಸಹಕಾರ ಸಂಘಗಳ ಬಂಡವಾಳವನ್ನು ಶಕ್ತಗೊಳಿಸಲು ಷೇರು ಬಂಡವಾಳ | 1 | 2·00 |
| | | | 2·15 |
| | ಒಟ್ಟು ಮೊತ್ತ | | 5·59 ಲಕ್ಷರೂಗಳು |

ಮೈಸೂರು ಜಿಲ್ಲೆಯಲ್ಲಿ 6 ಗಿರಿಜನರ ದೊಡ್ಡ ಪ್ರಮಾಣದ ವಿವಿದೋದ್ದೇಶ ಸಹಕಾರ ಸಂಘ (ಲ್ಯಾಂಪ್ಸ್) ಗಳು ಕಾರ್ಯ ನಿರ್ವಹಿಸುತ್ತಿವೆ. ಗಿರಿಜನರ ಶ್ರೆಯೋಭಿವೃದ್ಧಿ ಸಾಧಿಸಲು ಸದರೀ ಸಂಘಗಳ ಮುಖಾಂತರ ಗಿರಿಜನ ಸದಸ್ಯರಿಗೆ ಬೇಕಾದ ದಿನನಿತ್ಯದ ಅಗತ್ಯ ವಸ್ತುಗಳನ್ನು ವಿತರಿಸಲು ಸರಬರಾಜು ಕ್ರಮ ಕೈಗೊಳ್ಳಲಾಗಿದೆ. ಸದರಿ ಸಂಘಗಳ ಮೂಲಕ ಗಿರಿಜನರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿರುವುದನ್ನು ಕೊಂಡು ಸೂಕ್ತ ಬೆಲೆಯಲ್ಲಿ ಮಾರಾಟ ಮಾಡಲು ಕ್ರಯ ಮತ್ತು ವಿಕ್ರಯ ಕೇಂದ್ರಗಳನ್ನು ಸಹ ತೆರೆಯಲಾಗಿದೆ ಗಿರಿಜನರು ಅರಣ್ಯದಿಂದ ಸಂಗ್ರಹಿಸಿದ ವಸ್ತುಗಳನ್ನು ಶೇಖರಿಸಿಡಲು ಗೋದಾಮುಗಳನ್ನು ತೆರೆಯಲಾಗಿದೆ. ಪ್ರಸಕ್ತ ಸಾಲಿನಲ್ಲಿ 225 ಜನರನ್ನು ನೊಂದಾಯಿಸಿಕೊಳ್ಳಲು 0·05 ಲಕ್ಷ ರೂ ಗಳನ್ನು ಗಿರಿಜನ ಉಪಯೋಜನೆಯಡಿ ಖರ್ಚು ಮಾಡಲಾಗಿದೆ. ಹಾಗೂ ಯಶೋಧರಪುರ, ಹುಣಸೂರು ಇಲ್ಲಿ ವ್ಯಾಪಾರ ಮಳಿಗೆ ತೆರೆಯಲು 0·50 ಲಕ್ಷ ರೂ. ಗಳನ್ನು ಮಂಜೂರು ಮಾಡಲಾಗಿದ್ದು ಪರಿಶಿಷ್ಟ ಜಾತಿ ಸದಸ್ಯರಿಗೋಸ್ಕರವಾಗಿ ವಿಶೇಷ ಘಟಕ ಯೋಜನೆಯಡಿ 4508 ಪರಿಶಿಷ್ಟ ಜಾತಿಯವರನ್ನು ಸಹಕಾರ ಸಂಘಗಳಲ್ಲಿ ಸದಸ್ಯರನ್ನಾಗಿ ನೋಂದಾಯಿಸಲು 0·49 ಲಕ್ಷ ರೂ. ಗಳನ್ನು ಪರಿಶಿಷ್ಟ ಜಾತಿಯವರು ಪಾವತಿಸಬೇಕಾದ ಹೆಚ್ಚುವರಿ ಷೇರಿಗಾಗಿ ಬಡ್ಡಿ ರಹಿತ ಸಾಲಕ್ಕಾಗಿ 263 ಜನರಿಗೆ 0·37 ಲಕ್ಷ ರೂ. ಗಳನ್ನು ಖರ್ಚು ಮಾಡಲಾಗಿದೆ. ಪರಿಶಿಷ್ಟ ಜಾತಿಯವರಿಗೆ ನೀಡಿದ ದೀರ್ಘಾವಧಿ ಸಾಲದ ಮೇಲೆ ಶೇ 60 ರಷ್ಟು ಸಹಾಯಧನವನ್ನು ನೀಡಲು 8·00 ಲಕ್ಷ ರೂ. ಗಳನ್ನು ಜಿಲ್ಲಾ ಯೋಜನೆ ಮತ್ತು 2·40 ಲಕ್ಷ ರೂಗಳ ಕೇಂದ್ರ ನೆರವು ಒಟ್ಟು 10·40 ಲಕ್ಷ ರೂಗಳ ಗುರಿ ಇದ್ದು ಈ ಹಣವನ್ನು ಖರ್ಚು ಮಾಡಲು ಜಿಲ್ಲಾ ಪರಿಷತ್‌ನ ವಿಶೇಷ ಘಟಕ ಯೋಜನೆ "ಕ್ರಿಯಾ ಯೋಜನೆಯಡಿ" ಜಿಲ್ಲಾ ಪರಿಷತ್ ಸದಸ್ಯರು ಗುರುತಿಸಿದ ಹಳ್ಳಿಗಳ ಮುಖಾಂತರವೇ ಈ ಯೋಜನೆ ಜಾರಿಗೊಳಿಸಲು ನಿಬಂಧನೆ ವಿಧಿಸಿದ ಕಾರಣ ಸಹಕಾರ ಇಲಾಖೆವತಿಯಿಂದ ಸಲ್ಲಿಸಿದ 11·40 ಲಕ್ಷ ರೂ. ಗಳ ಪ್ರಸ್ತಾವನೆಗಳು ಮಂಜೂರು ಮಾಡದೇ ಇದ್ದ ಕಾರಣ ಈ ಹಣವನ್ನು ಖರ್ಚು ಮಾಡಿರುವುದಿಲ್ಲ. ಸದರಿ ಮೊಬಲಗನ್ನು ಜಿಲ್ಲಾ ಪರಿಷತ್ ಪರಿಶಿಷ್ಟ ಜಾತಿಯವರ ಕ್ಷೇಮಾಭಿವೃದ್ಧಿಗೆ ಆಯ್ದ ಹಳ್ಳಿಗಳಲ್ಲಿ ಉಪಯೋಗಿಸಿಕೊಂಡಿರುತ್ತದೆ.

## 19. ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ

1989–90ನೇ ಸಾಲಿನಲ್ಲಿ ಈ ಯೋಜನೆಗೆ ಪ್ರತಿ ಮಂಡಲಕ್ಕೆ 60 ಮಂದಿ ಫಲಾನುಭವಿಗಳಂತೆ ಒಟ್ಟು 9,900 ಮಂದಿ ಫಲಾನುಭವಿಗಳಿಗೆ ನೆರವು ಒದಗಿಸಲು ಫಲಾನುಭವಿಗಳನ್ನು ಗ್ರಾಮಸಭೆಯ ಮೂಲಕ ಆರಿಸಲಾಯಿತು. ಆರ್ಥಿಕವಾಗಿ 220·443 ಲಕ್ಷ ರೂ. ಗಳ ಗುರಿಯನ್ನು ಸರ್ಕಾರವು ನಿಗದಿಪಡಿಸಿದ್ದು ಒಟ್ಟು 9,009 ಮಂದಿ ಫಲಾನುಭವಿಗಳಿಗೆ ನೆರವು ಒದಗಿಸಿದ್ದು ಈ ಯೋಜನೆಯಲ್ಲಿ ಒಟ್ಟು 170·084 ಲಕ್ಷ ರೂ. ಗಳನ್ನು ಖರ್ಚು ಮಾಡಲಾಯಿತು.

ನೆರವು ಪಡೆದ ಒಟ್ಟು ಫಲಾನುಭವಿಗಳಲ್ಲಿ 343 ಮಂದಿ ಸಣ್ಣ ರೈತರು, 1970 ಮಂದಿ ಅತಿ ಸಣ್ಣ ರೈತರು, 6 595 ಮಂದಿ ಕೃಷಿ ಕಾರ್ಮಿಕರು ಹಾಗೂ 101 ಮಂದಿ ಕುಶಲಕರ್ಮಿಗಳು ಸೇರಿರುತ್ತಾರೆ. ನೆರವು ಪಡೆದ ಒಟ್ಟು ಫಲಾನುಭವಿಗಳಲ್ಲಿ 2,453 ಮಂದಿ ಪರಿಶಿಷ್ಟ ಜಾತಿಯ ಫಲಾನುಭವಿಗಳು, 130 ಮಂದಿ ಪರಿಶಿಷ್ಟ ಪಂಗಡದ ಫಲಾನುಭವಿಗಳು, ಮತ್ತು 2,309 ಮಂದಿ ಮಹಿಳಾ ಫಲಾನುಭವಿಗಳು ಸೇರಿರುತ್ತಾರೆ.

ನೆರವು ಪಡೆದ ಒಟ್ಟು ಫಲಾನುಭವಿಗಳಲ್ಲಿ, 1,469 ಮಂದಿಗೆ ವ್ಯವಸಾಯ ಯೋಜನೆಯಲ್ಲಿ, 6,064 ಮಂದಿಗೆ ಪಶುಪಾಲನೆ ಯೋಜನೆಯಲ್ಲಿ ರೇಷ್ಮೆ ಯೋಜನೆಯಲ್ಲಿ 167 ಮಂದಿಗೆ, ಮೀನುಗಾರಿಕೆ ಯೋಜನೆಯಲ್ಲಿ ಒಬ್ಬರಿಗೆ ಸಣ್ಣ ನೀರಾವರಿ ಯೋಜನೆಯಲ್ಲಿ 5 ಮಂದಿಗೆ ಹಾಗೂ ಐ.ಎಸ್.ಬಿ. ಸೆಕ್ಟರ್‌ನಲ್ಲಿ 1513 ಮಂದಿಗೆ ನೆರವು ಒದಗಿಸಲಾಗಿದೆ.

## ಅಂತ್ಯೋದಯ

ಕಡುಬಡವರನ್ನು ಬಡತನ ರೇಖೆಯಿಂದ ಮೇಲೆ ತರಲು ಅನುಕೂಲವಾಗುವಂತೆ ಅನೇಕ ಕಾರ್ಯಕ್ರಮಗಳನ್ನು ಕಲ್ಪಿಸಿ ಅವುಗಳ ಉಪಯೋಗದಿಂದ ಆರ್ಥಿಕೋತ್ಪತ್ತಿಯನ್ನು ಹೊಂದಲು ಸಹಾಯ ಮಾಡುವಂತಹ ಯೋಜನೆಯೇ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ. ಅದಕ್ಕೆ ಹೊಂದಿಕೊಂಡಂತ್ತಿರುವ ಯೋಜನೆಯೇ ಅಂತ್ಯೋದಯ. ಈ ಜಿಲ್ಲೆಯಲ್ಲಿ ಹೆಚ್. ಡಿ. ಕೋಟೆ, ಮೈಸೂರು, ಕೊಳ್ಳೇಗಾಲ, ಗುಂಡ್ಲುಪೇಟೆ ಮತ್ತು ನಂಜನಗೂಡು ತಾಲ್ಲೂಕುಗಳಲ್ಲಿ ಕಾರ್ಯಗತಗೊಳಿಸಲಾಗುತ್ತಿದೆ.

ಈ ಯೋಜನೆಯನ್ನು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಮಾರ್ಗದರ್ಶನ ಮೇರೆಗೆ 1983–84 ರಿಂದ 87–88ರವರೆಗೆ ಪ್ರತ್ಯೇಕವಾಗಿ ಸೌಲಭ್ಯ ಒದಗಿಸಲಾಗುತ್ತಿತ್ತು. ಆದರೆ 1988–89 ರಿಂದ ಈಚೆಗೆ ಸರ್ಕಾರಿ ಆದೇಶದ ಮೇರೆಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯಲ್ಲಿ ಆಯ್ಕೆ ಮಾಡಿದ ಫಲಾನುಭವಿಗಳಲ್ಲಿ ಒಂದು ಮಂಡಲಕ್ಕೆ ಐದು ಅಥವಾ ಆರು ಮಂದಿ ಫಲಾನುಭವಿಗಳನ್ನು ಆಯ್ಕೆ ಮಾಡಿಕೊಂಡು ಸದರಿ ಫಲಾನುಭವಿಗಳಿಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಸಹಾಯಧನದ ಜೊತೆಗೆ 1,000–00 ರೂ. ಗಳನ್ನು ಸಾಲದ ಲೆಕ್ಕಕ್ಕೆ ಜಮಾ ಮಾಡಿಕೊಳ್ಳಲು ಹೆಚ್ಚುವರಿಯಾಗಿ ಕೊಡಲಾಗುತ್ತಿದೆ

ಈ ಯೋಜನೆಯಡಿ 1989-90ನೇ ಸಾಲಿಗೆ 5·10 ಲಕ್ಷರೂಗಳ ಸಹಾಯಧನದೊಡನೆ 510 ಫಲಾನುಭವಿಗಳಿಗೆ ಸಹಾಯಧನ ಒದಗಿಸುವ ಗುರಿ ಇದ್ದು ಇದಕ್ಕಾಗಿ ಸರ್ಕಾರದಿಂದ 5·10 ಲಕ್ಷ ರೂಗಳು ಬಿಡುಗಡೆಯಾಯಿತು. 3·85 ಲಕ್ಷ ರೂಗಳ ಅನುಧಾನ ನೀಡಿ 310 ಫಲಾನುಭವಿಗಳಿಗೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ರೀತ್ಯಾ ಸವಲತ್ತುಗಳನ್ನು ನೀಡಲಾಯಿತು. ಪ್ರಯೋಜನ ಪಡೆದ 310 ಫಲಾನುಭವಿಗಳ ಪೈಕಿ 121 ಪರಿಶಿಷ್ಟ ಜಾತಿ, 4 ಪರಿಶಿಷ್ಟ ಪಂಗಡದವರು ಹಾಗೂ 176 ಮಂದಿ ಫಲಾನುಭವಿಗಳು ಮಹಿಳೆಯರು ಆಗಿರುತ್ತಾರೆ. ಇದಲ್ಲದೇ ಸಣ್ಣರೈತರು 20ಮಂದಿ, ಅತಿಸಣ್ಣರೈತರು 281 ಮಂದಿ, ಕೃಷಿ ಕಾರ್ಮಿಕರು ಮತ್ತು 3 ಮಂದಿ ಕುಶಲ ಕಾರ್ಮಿಕರಿಗೆ ಸೌಲಭ್ಯವನ್ನು ಒದಗಿಸಲಾಯಿತು. ಅವರಿಗೆ ಎತ್ತುಗಾಡಿ, ಕರೆವ ಹಸು, ಎಮ್ಮೆ, ಕುರಿ, ಮೇಕೆ ಐ.ಎಸ್.ಬಿ. ಯೋಜನೆಯಲ್ಲಿ 38 ಮಂದಿಗೆ ಸವಲತ್ತುಗಳನ್ನು ಒದಗಿಸಲಾಯಿತು.

## ನೂರು ಬಾವಿ ಯೋಜನೆ

ಸಣ್ಣ ಮತ್ತು ಅತಿ ಸಣ್ಣ ರೈತರು ತಮ್ಮ ಭೂಮಿಯಲ್ಲಿ ನೀರಾವರಿಗಾಗಿ ಬಾವಿ ತೆಗೆದು ವಿದ್ಯುಚ್ಛಕ್ತಿ ಅಳವಡಿಸಿಕೊಂಡು ಅಲ್ಪ ಭೂಮಿಯಲ್ಲಿಯೇ ಹೆಚ್ಚು ಬೆಳೆ ತೆಗೆದು ಅಭಿವೃದ್ಧಿಗೊಳಿಸಲು ನೂರು ಬಾವಿ ಯೋಜನೆಯಲ್ಲಿ ಅವಕಾಶವಿದೆ. ಈ ಯೋಜನೆಯಲ್ಲಿ ಸಣ್ಣ ರೈತರಿಗೆ ಶೇ. 25 ಮತ್ತು ಅತಿ ಸಣ್ಣ ರೈತರಿಗೆ ಶೇ. 33⅓ ಸಹಾಯ ಧನವನ್ನು ಪಡೆಯಲು ಅವಕಾಶವಿದೆ. ಈ ಯೋಜನೆಯಲ್ಲಿ ಸಣ್ಣ ಮತ್ತು ಅತಿ ಸಣ್ಣ ರೈತರು ಬ್ಯಾಂಕುಗಳಲ್ಲಿ ಸಾಲಕ್ಕಾಗಿ ಅರ್ಜಿ ಹಾಕಲು ಅವಶ್ಯಕ ದಾಖಲಾತಿಗಳನ್ನು ರೈತರುಗಳೇ ಹೊಂದಲು ಸಾಕಷ್ಟು ವಿಳಂಬವಾಗುತ್ತಿತ್ತು. ಜಿಲ್ಲಾ ಪರಿಷತ್ ಅಸ್ತಿತ್ವಕ್ಕೆ ಬಂದ ನಂತರ ವಿಳಂಬವನ್ನು ತಪ್ಪಿಸಲು ಅಂತರಗಂಗಾ ಎಂಬ ಬೃಹತ್ ಯೋಜನೆಯನ್ನು ಹಮ್ಮಿಕೊಂಡು ಈ ಯೋಜನೆಯ ಮೇರೆಗೆ ಜಿಲ್ಲಾ ಪರಿಷತ್ ಮುಖಾಂತರ ಬಾವಿಗಾಗಿ ಕೋರಿ ಅರ್ಜಿ ಸಲ್ಲಿಸಿದ ರೈತರ ಜಮೀನಿನಲ್ಲಿ ಜಿಯೋಫಿಸಿಕಲ್ ಸರ್ವೆ ಮಾಡಿಸಿ ಫಲಪ್ರದವಾದ ರೈತರುಗಳ ಜಮೀನಿನಲ್ಲಿ ಬಾವಿ ತೆಗೆಯಲು ಸಾಲಕ್ಕಾಗಿ ಬೇಕಾದ ಎಲ್ಲಾ ದಾಖಲಾತಿಗಳನ್ನು ರೈತರ ಪರವಾಗಿ ಜಿಲ್ಲಾ ಪರಿಷತ್ ವತಿಯಿಂದಲೇ ಪಡೆದು ಬ್ಯಾಂಕುಗಳಿಂದ ಸಾಲ ಮಂಜೂರಾತಿ ಪಡೆದು ಕರ್ನಾಟಕ ಕೃಷಿ ಕೈಗಾರಿಕಾ ನಿಗಮದ ಮುಖಾಂತರ ಬಾವಿ ತೋಡಿಸಿ ವಿದ್ಯುತ್ ಸೌಕರ್ಯ ಒದಗಿಸಿ ನಂತರ ಬಾವಿಗಳನ್ನು ರೈತರಿಗೆ ಒಪ್ಪಿಸಲಾಗುವುದು. ಈ ಯೋಜನೆಯಲ್ಲಿ ಬ್ಯಾಂಕುಗಳಿಂದ ಸಾಲ ಮಂಜೂರಾತಿ ಆಗಲು ವಿಳಂಬವಾಗಿದ್ದು ಸಾಲ ಮಂಜೂರಾತಿಗಾಗಿ ಇದ್ದ ನ್ಯೂನತೆಗಳನ್ನು ಬ್ಯಾಂಕರುಗಳ ಸಭೆಯನ್ನು ಕರೆದು ಚರ್ಚಿಸಿ ಸಮಸ್ಯೆಗಳನ್ನು ಬಗೆಹರಿಸಲಾಯಿತು. ಒಂದು ಪಕ್ಷ ನೀರು ಬಾರದಿದ್ದಲ್ಲಿ ಬಾವಿಗೆ ತಗುಲಿದ ಪೂರ್ಣ ವೆಚ್ಚವನ್ನು ರೈತರಿಗೆ ಮನ್ನಾ ಮಾಡಲಾಗುವುದು. ಈ

ಯೋಜನೆಯಲ್ಲಿ ಈವರೆವಿಗೆ 1475 ಅರ್ಜಿಗಳು ವಿವಿಧ ತಾಲ್ಲೂಕುಗಳಿಂದ ಬಂದಿದ್ದು 253 ಬಾವಿಗಳನ್ನು ಕೊರೆಯಲಾಗಿದೆ. 1988-89ರಲ್ಲಿ ಬಿಡುಗಡೆಯಾದ 32 ಲಕ್ಷ ರೂಗಳಲ್ಲಿ 1989-90ರಲ್ಲಿ 520 ಫಲಾನುಭವಿಗಳಿಗೆ ಸಹಾಯಧನ ವಿತರಿಸಲಾಗಿದೆ. 1989-90ರ ಸಾಲಿನಲ್ಲಿ ನೂರು ಬಾವಿ ಯೋಜನೆಯಲ್ಲಿ 84 ಕೊಳವೆ ಬಾವಿ ಮತ್ತು 121 ತೋಡು ಬಾವಿಯನ್ನು ಕೊರೆಯಲಾಗಿದೆ.

## ಗ್ರಾಮೀಣ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ (ಡ್ವಾಕ್ರಾ)

ಗ್ರಾಮೀಣ ಮಹಿಳೆಯರು ಮತ್ತು ಮಕ್ಕಳ ಅಭಿವೃದ್ಧಿ ಕಾರ್ಯಕ್ರಮ ಅಂದರೆ ಡ್ವಾಕ್ರಾ ಯೋಜನೆಯು ಐ.ಆರ್.ಡಿ.ಪಿ. ಯೋಜನೆಯ ಉಪಯೋಜನೆ ಆಗಿದ್ದು ಕೇಂದ್ರ,ರಾಜ್ಯ ಹಾಗೂ ಯುನಿಸೆಫ್ ಸಂಸ್ಥೆಗಳ ನೆರವಿನಿಂದ 1987-88ನೇ ಸಾಲಿನಿಂದ ಅನುಷ್ಠಾನಗೊಳಿಸಲ್ಪಟ್ಟಿದೆ. ಈ ಯೋಜನೆಯ ಮುಖ್ಯ ಉದ್ದೇಶ ಗ್ರಾಮೀಣ ಮಹಿಳೆಯರಿಗೆ ಸ್ಥಳೀಯವಾಗಿಯೇ ಆರ್ಥಿಕ ಉತ್ಪನ್ನ ಚಟುವಟಿಕೆಗಳನ್ನು ತೆಗೆದುಕೊಳ್ಳಲು ಸಹಕರಿಸಿ, ಸದರಿ ಚಟುವಟಿಕೆಯ ಮೂಲಕ ಸಾಕಷ್ಟು ಆದಾಯಗಳಿಸುವಂತೆ ನೋಡಿಕೊಳ್ಳುವುದು. ಏಕೆಂದರೆ ಮಹಿಳೆಯರು ಗಳಿಸುವ ಆದಾಯ ನೇರವಾಗಿ ಕುಟುಂಬದ ಪೋಷಣೆ ಹಾಗೂ ಮಕ್ಕಳ ಶಿಕ್ಷಣಕ್ಕೆ ಉಪಯೋಗಿಸುವುದರಿಂದ ತನ್ಮೂಲಕ ಕುಟುಂಬದ ಏಳಿಗೆ ಸಾಧಿಸಲು ಕಾರಣವಾಗುವುದು. ಪ್ರತಿ ಚಟುವಟಿಕೆಗೆ ಸುಮಾರು 11-15 ಮಹಿಳೆಯರು ಆಯ್ಕೆಗೊಳ್ಳುವರು. ಆಯ್ಕೆಯಾದ ಫಲಾನುಭವಿಗಳು ಒಂದೆಡೆ ಕುಳಿತು ತಮಗೆ ಮಂಜೂರಾದ ಸವಲತ್ತುಗಳನ್ನು ಉಪಯೋಗಿಸಿ ಉತ್ಪನ್ನಗಳನ್ನು ಗುಂಪಾಗಿ ತಯಾರಿಸುವರು. ತಯಾರಿಸಿದ ಉತ್ಪನ್ನಗಳಿಗೆ ಸ್ಥಳೀಯ ಮಾರುಕಟ್ಟೆಗಳಲ್ಲಿ ಅಥವಾ ಇಲಾಖೆಗಳ ಮೂಲಕ ಮಾರಾಟಮಾಡಲು ಸಹಕರಿಸಲಾಗುವುದು. ಈ ಯೋಜನೆ ಅಡಿಯಲ್ಲಿ ಆರ್ಥಿಕ ಉತ್ಪನ್ನ ಚಟುವಟಿಕೆಗಳನ್ನು ತೆಗೆದುಕೊಳ್ಳುವುದಲ್ಲದೆ ಗ್ರಾಮೀಣ ಮಹಿಳೆಯರಿಗೆ ಆರೋಗ್ಯ ಮತ್ತು ನೈರ್ಮಲ್ಯದ ಶಿಕ್ಷಣ, ವಯಸ್ಕರ ಶಿಕ್ಷಣ, ಮಕ್ಕಳಿಗೆ ಚುಚ್ಚುಮದ್ದು ಹಾಗೂ ಆರೋಗ್ಯ ಸೇವೆಯನ್ನು ಕೊಡಿಸಲು ನೆರವಾಗುವುದು. ಜಿಲ್ಲೆಗೆ ಒಟ್ಟು 330 ಗುಂಪುಗಳನ್ನು ನಿಗದಿಪಡಿಸಲಾಗಿದ್ದು ಪ್ರತಿ ಗುಂಪಿಗೆ 0·15 ಲಕ್ಷ ರೂ. ಮೊಬಲಗಿನಂತೆ ಹಾಗೂ ಗುಂಪಿನ ನಾಯಕತ್ವ ಹೊಂದಿರುವವರಿಗೆ ಪ್ರಯಾಣ ದರ, ಒಟ್ಟು 50·16 ಲಕ್ಷ ರೂ. ಗಳು ಬಿಡುಗಡೆಯಾಗಿರುತ್ತದೆ. ಇಲ್ಲಿಯವರೆಗೆ ಒಟ್ಟು 183 ಗುಂಪುಗಳ ರಚನೆಯಾಗಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗಿದೆ. ಗುಡಿ ಕೈಗಾರಿಕೆಗಳಾದ ಅಗರಬತ್ತಿ ತಯಾರಿಕೆ, ಕಂಬಳಿ ನೇಯ್ಗೆ, ಚಾಪೆ ಹೆಣೆಯುವಿಕೆ, ಟೈಲರಿಂಗ್, ಕುಂಬಾರಿಕೆ, ರೇಷ್ಮೆ ನೂಲು ತೆಗೆಯುವಿಕೆ, ರೇಷ್ಮೆ ಹುಳು ಸಾಕಾಣಿಕೆ, ಹುರಿಹಗ್ಗ ತಯಾರಿಕೆ ಜೊತೆಗೆ ಹೈನುಗಾರಿಕೆ ಉದ್ಯಮವನ್ನು ಕೈಗೊಳ್ಳಲಾಗಿದೆ. ಇದರೊಂದಿಗೆ ಶಿಕ್ಷಣ ಇಲಾಖೆಗೆ ಅಗತ್ಯವಾದ ಸೀಮೆಸುಣ್ಣ ತಯಾರಿಕೆ ಹಾಗೂ ಆರೋಗ್ಯ ಇಲಾಖೆ ಮತ್ತು ಪಶುವೈದ್ಯ ಇಲಾಖೆಗೆ ಅಗತ್ಯವಾದ ಫಿನಾಯಿಲ್ ತಯಾರಿಕೆ ಮತ್ತು ಸೋಪಿನ ದ್ರಾವಣ ತಯಾರಿಕೆ ಯೋಜನೆಯನ್ನು ಪ್ರಸ್ತುತ ಸಾಲಿನಲ್ಲಿ ಕೈಗೆತ್ತಿಕೊಳ್ಳಲಾಗಿದೆ ಈ ಸಾಲಿನಲ್ಲಿ ಸಾಧಿಸಿದ ಮಹತ್ತರ ಪ್ರಗತಿ ಎಂದರೆ ಜಿಲ್ಲೆಯಲ್ಲಿ ರಚಿಸಿ ರುವ 30 ಡ್ವಾಕ್ರಾ ಟೈಲರಿಂಗ್ ಘಟಕಗಳಲ್ಲಿನ ಸುಮಾರು 450 ರಿಂದ 500 ಮಹಿಳಾ ಫಲಾನುಭವಿಗಳು ಮೈಸೂರು ಜಿಲ್ಲೆಯ ವಿದ್ಯಾವಿಕಾಸ ಯೋಜನೆಯ ಸಮವಸ್ತ್ರಗಳನ್ನಲ್ಲದೆ, ಅಕ್ಕಪಕ್ಕದ ಜಿಲ್ಲೆಗಳಾದ ಮಂಡ್ಯ, ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಯ ಸುಮಾರು 1·75 ಲಕ್ಷ ಸೆಟ್ ಸಮವಸ್ತ್ರಗಳನ್ನು ಹಾಗೂ ಬಿ. ಸಿ. ಎಂ. ಹಾಸ್ಟೆಲ್ ಸಮವಸ್ತ್ರಗಳನ್ನು ಉತ್ತಮವಾಗಿ ಸಿದ್ಧಪಡಿಸಿ ನೀಡುತ್ತಾರೆ. ಇದೇ ರೀತಿ ತೋಟಗಾರಿಕೆ ಇಲಾಖೆಗೆ ಅಗತ್ಯವಾಗಿ ಬೇಕಾಗಿರುವ ಕುಂಡಗಳನ್ನು ಸಹ ಡ್ವಾಕ್ರಾ ಯೋಜನೆಯ ವತಿಯಿಂದ ಸಿದ್ಧಪಡಿಸಲಾಗುತ್ತಿದೆ.

ಈ ಯೋಜನೆಯಡಿಯಲ್ಲಿ ಆಯ್ಕೆ ಆಗಿರುವ ಫಲಾನುಭವಿಗಳಿಗೆ ಅವಶ್ಯವಿದ್ದಲ್ಲಿ ಟ್ರೈಸಂ ಯೋಜನೆಯಡಿಯಲ್ಲಿ ತರಬೇತಿ ನೀಡಲು ಸಹ ಕ್ರಮ ಕೈಗೊಳ್ಳಲಾಗಿದ್ದು ಅಗರಬತ್ತಿ, ಕಂಬಳಿ, ಚಾಪೆ ಹೆಣಿಕೆ, ಹುರಿಹಗ್ಗ ತಯಾರಿಕೆಯಲ್ಲಿ ಚಟುವಟಿಕೆಗನುಗುಣವಾಗಿ ತರಬೇತಿಯನ್ನು ನೀಡಲಾಗಿದೆ.

ತಯಾರಾದ ಉತ್ಪನ್ನಗಳಿಗೆ ಮಾರುಕಟ್ಟೆ ಸೌಲಭ್ಯವನ್ನು ಕಲ್ಪಿಸಲು ಕ್ರಮ ಕೈಗೊಳ್ಳಲಾಗಿದೆ. ಉದಾಹರಣೆ ವಾಸು ಅಗರಬತ್ತಿ ಕಂಪನಿಗೆ ತಯಾರಾದ ಅಗರಬತ್ತಿ ಸರಬರಾಜು ಮಾಡುವಲ್ಲಿ, ಹುರಿಹಗ್ಗ ತಯಾರಿಕೆಯಲ್ಲಿ ತೆಂಗಿನ ನಾರಿನ ಅಭಿವೃದ್ಧಿ ನಿಗಮಕ್ಕೆ ಟೈ–ಅಫ್ ಮಾಡಲಾಗಿದೆ. ಅಂದರೆ ಫಲಾನುಭವಿಯು ತಾನು ತಯಾರಿಸಿದ ಉತ್ಪನ್ನಕ್ಕೆ ಪಡೆಯಬಹುದಾದಂತಹ ಪ್ರತಿಫಲವನ್ನು ಈ ಡ್ವಾಕ್ರಾ ಯೋಜನೆಯಿಂದ ಹೊಂದುತ್ತಿರುವುದು ಈ ಯೋಜನೆಯ ಒಂದು ಮಹತ್ತರ ಸಾಧನೆಯಾಗಿದೆ.

## ಜೈವಾನಿಲ ಯೋಜನೆ

ಗ್ರಾಮಾಂತರ ಪ್ರದೇಶದಲ್ಲಿ ಇಂಧನದ ಕೊರತೆ ಇದ್ದು ಈ ಕೊರತೆಯನ್ನು ನಿವಾರಿಸಲು ಜೈವಿಕಅನಿಲ ಸ್ಥಾವರಗಳ ಸ್ಥಾಪನೆಯ ಅಗತ್ಯವೆಂದು ಪರಿಗಣಿಸಲಾಗಿದೆ 1989–90ನೇ ಸಾಲಿಗೆ ಸರ್ಕಾರದಿಂದ ಈ ಯೋಜನೆಗೆ 6·00 ಲಕ್ಷ ರೂ.ಗಳು ಬಿಡುಗಡೆಯಾಗಿದ್ದು 880 ಜೈವಿಕ ಅನಿಲ ಸ್ಥಾವರಗಳನ್ನು ಸ್ಥಾಪಿಸುವ ಗುರಿಯಿದ್ದು, ವರ್ಷದ ಕೊನೆಗೆ 282 ಅನಿಲ ಸ್ಥಾವರಗಳನ್ನು ಸ್ಥಾಪಿಸಲಾಗಿದ್ದು ಈ ಸಾಲಿನ ಅಂತ್ಯದವರೆಗೆ 12·01 ಲಕ್ಷ ರೂ. ಗಳನ್ನು ಖರ್ಚು ಮಾಡಲಾಗಿದೆ.

## ಸಮಗ್ರ ಗ್ರಾಮೀಣ ಇಂದನ ಶಕ್ತಿ ಯೋಜನೆ

ಸಮಗ್ರ ಗ್ರಾಮೀಣ ಇಂದನ ಶಕ್ತಿ ಯೋಜನೆಯು 1987–88ನೇ ಸಾಲಿನಿಂದ ಹೊಸ ಯೋಜನೆಯಾಗಿದ್ದು ಈ ಯೋಜನೆಯು ಈ ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿಗೆ ಮಾತ್ರ ಸೀಮಿತವಾಗಿರುತ್ತದೆ. ಈ ಯೋಜನೆಯಲ್ಲಿ 1989-90ನೇ ಸಾಲಿಗೆ ಒಟ್ಟು 2,631 ವಿವಿಧ ಸೌರ ಶಕ್ತಿ ಉಪಕರಣಗಳನ್ನು ಖರೀದಿಸುವ ಗುರಿ ಇದ್ದು ಈ ಸಂಬಂಧವಾಗಿ ಸರ್ಕಾರದ ದಿನಾಂಕ 31-8-89ರ ಟೆಲೆಕ್ಸ್ ಪತ್ರದಲ್ಲಿ ಈ ಯೋಜನೆಯಲ್ಲಿ ಪ್ರಾತ್ಯಕ್ಷತೆ ಹಾಗೂ ಸಹಾಯಧನದ ರೂಪದಲ್ಲಿ ಯಾವುದೇ ಖರ್ಚನ್ನು ಭರಿಸಬಾರದು ಎಂಬ ನಿರ್ದೇಶನದ ಮೇರೆಗೆ 1989–90ನೇ ಸಾಲಿಗೆ ಸೌರಶಕ್ತಿಯ ಉಪಕರಣಗಳನ್ನು ಖರೀದಿಸಿರುವುದಿಲ್ಲ. ಆದರೆ 1988–89ನೇ ಸಾಲಿನಲ್ಲಿ ಖರೀದಿಸಲಾಗಿದ್ದ ಸೌರಶಕ್ತಿಯ ಉಪಕರಣಗಳು ಸ್ಥಾಪನೆ ವೆಚ್ಚ ಹಾಗೂ ಸಿಬ್ಬಂದಿ ವರ್ಗದ ವೇತನದ ಖರ್ಚಿಗಾಗಿ 1·75 ಲಕ್ಷ ರೂ. ಗಳನ್ನು 1989–90ನೇ ಸಾಲಿನಲ್ಲಿ ಖರ್ಚು ಮಾಡಲಾಗಿದೆ.

## ಅಸ್ತ್ರ ಒಲೆ ಯೋಜನೆ

ಇಂಧನಶಕ್ತಿ ನಮ್ಮ ಇಂದಿನ ಜೀವನ ಶೈಲಿಗೆ ಮುಖ್ಯ ಬುನಾದಿ ಎಂದು ಒತ್ತಿ ಹೇಳಬೇಕಾಗಿಲ್ಲ. ಈ ಜೀವನ ಶೈಲಿ ವಿಕಾಸಗೊಳ್ಳಬೇಕಾದರೆ ಇಂಧನ ಉಪಯೋಗದಲ್ಲಿ ಮಾರ್ಪಾಡುಗಳಾಗಿ ದಕ್ಷತೆ ಸುಧಾರಿಸಬೇಕಾಗಿರುವುದು ಅಗತ್ಯ. ಈ ದಿಕ್ಕಿನಲ್ಲಿ ಯಶಸ್ವಿ ಗೊಳಿಸುವುದರಲ್ಲಿ ಅಸ್ತ್ರ ಒಲೆಯು ಒಂದು ಗ್ರಾಮಾಂತರ ಪ್ರದೇಶದಲ್ಲಿ ಅಡಿಗೆಮಾಡುವಾಗ ಸೌದೆಯ ಉಳಿತಾಯ, ಹೊಗೆಯ ಉಚ್ಚಾಟನೆಮತ್ತು ಬೇಗನೆ ಅಡಿಗೆಯ ಮುಕ್ತಾಯ ಈ ಒಲೆಯ ಮುಖ್ಯಾಂಶಗಳು. 1989–90ನೇ ಸಾಲಿಗೆ ಈ ಜಿಲ್ಲೆಗೆ 6,000 ಒಲೆಗಳನ್ನು ನಿರ್ಮಿಸುವ ಗುರಿ ಇದ್ದು ಈ ಯೋಜನೆಗೆ 5·75 ಲಕ್ಷ ರೂ. ಅನುದಾನವು ಸರ್ಕಾರದಿಂದ ಬಿಡುಗಡೆಯಾಗಿದೆ. ಮಾರ್ಚಿ 1990ರ ಅಂತ್ಯಕ್ಕೆ 4378 ಅಸ್ತ್ರ ಒಲೆಗಳ ನಿರ್ಮಾಣ ಮತ್ತು 365 ಸ್ಥಳಾಂತರಿಸಬಲ್ಲ ಒಲೆಗಳನ್ನು ವಿವಿಧ ಫಲಾನುಭವಿಗಳಿಗೆ ವಿತರಿಸಲಾಗಿದೆ. 1989-90ನೇ ಸಾಲಿನಲ್ಲಿ 3·22 ಲಕ್ಷ ರೂ. ಗಳನ್ನು ಈ ಯೋಜನೆಯಲ್ಲಿ ಖರ್ಚು ಮಾಡಲಾಗಿದೆ.

## ಜೀತವಿಮುಕ್ತರ ಪುನರ್ವಸತಿ ಯೋಜನೆ

ಈ ಯೋಜನೆಯನ್ನು 9–2–76 ರಿಂದ ಕೇಂದ್ರ ಸರ್ಕಾರದವರು ಜಾರಿಗೆ ತಂದಿರುತ್ತಾರೆ. ಈ ಯೋಜನೆಯನ್ವಯ ಜೀತವಿಮುಕ್ತರ ಪದ್ಧತಿ (ಪುನರ್ ವಸತಿ) ಕಾಯ್ದೆ 1976 ರಂತೆ ಗುರುತಿಸಿ ಬಿಡುಗಡೆ ಮಾಡಿದ ಜೀತವಿಮುಕ್ತರಿಗೆ ಸ್ವಯಂ ಜೀವನೋಪಾಯ ನಡೆಸುವುದಕ್ಕಾಗಿ ಫಲಾನುಭವಿಗಳಿಗೆ ತಲಾ 6250·00 ರೂ. ಗಳ ಸವಲತ್ತುಗಳನ್ನು ನೀಡಿ ಜೀತವಿಮುಕ್ತರು ಸಮಾಜದಲ್ಲಿ ಇತರರಂತೆ ಸರಿಸಮಾನರಾಗಿ ಜೀವನ ನಡೆಸಲು ಸಹಾಯವಾಗುವಂತೆ ಎತ್ತು ಗಾಡಿ, ಆಡುಗಳು, ಸಣ್ಣ ಅಂಗಡಿ, ಹಾಲು ಕೊಡುವ ಹಸುಗಳು, ಕುರಿಗಳು,

ಮೇಕೆಗಳು ಮತ್ತು ಮುಂತಾದುವುಗಳನ್ನು ಸವಲತ್ತು ರೂಪದಲ್ಲಿ ನೀಡಲಾ ಗುತ್ತಿದೆ. 89–90ನೇ ಸಾಲಿನಲ್ಲಿ 1918 ಜೀತ ವಿಮುಕ್ತರುಗಳಿಗೆ ಸವಲತ್ತುಗಳನ್ನು ನೀಡಿ, ಇದಕ್ಕಾಗಿ 89·375 ಲಕ್ಷ ರೂ. ಗಳನ್ನು ವೆಚ್ಚಮಾಡ ಲಾಗಿದೆ. ಇದರ ವೆಚ್ಚವನ್ನು ಕೇಂದ್ರ ಸರ್ಕಾರದವರು ಸಂಪೂರ್ಣವಾಗಿ ಭರಿಸುತ್ತಾರೆ. ಮಾರ್ಚಿ 1990ರ ಅಂತ್ಯಕ್ಕೆ 18,027 ಜೀತವಿಮುಕ್ತರುಗಳಿಗೆ ಸವಲತ್ತು ಗಳನ್ನು ನೀಡಿ ಪುನರ್‌ವಸತಿಗೊಳಿಸಲಾಗಿದೆ.

## ಜವಾಹರ್ ರೋಜಗಾರ್ ಯೋಜನೆ

### (ಎನ್. ಆರ್. ಇ. ಪಿ.)

ಐದನೇ ಪಂಚವಾರ್ಷಿಕ ಯೋಜನೆಯಲ್ಲಿ ರಾಷ್ಟ್ರೀಯ ಗ್ರಾಮಾಂತರ ಉದ್ಯೋಗ ಯೋಜನೆ (ಎನ್.ಆರ್. ಇ.ಪಿ.) ಎಂಬ ಕಾರ್ಯಕ್ರಮವನ್ನು 1–4–1981 ರಿಂದ ರಾಷ್ಟ್ರಾದ್ಯಂತ ಅನುಷ್ಠಾನಗೊಳಿಸಲು ಅಳವಡಿಸಿದ್ದರು. ಇದರ ಮೂಲ ಉದ್ದೇಶ–ಗ್ರಾಮಾಂತರ ಜನರಿಗೆ ಉದ್ಯೋಗವನ್ನು ಕಲ್ಪಿಸಿಕೊಡುವುದರ ಜೊತೆಗೆ ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸುವುದು ಮತ್ತು ಹಳ್ಳಿಗಳನ್ನು ಉತ್ತಮ ಮಟ್ಟಕ್ಕೆ ತರುವುದೇ ಇದರ ಮುಖ್ಯ ಗುರಿ ಆಗಿತ್ತು. ಇದರ ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದವರು ಕ್ರಮವಾಗಿ ಶೇಕಡ 50 : 50ರ ಪ್ರಮಾಣದಲ್ಲಿ ಭರಿಸುತ್ತಿದ್ದರು.

ನಂತರ ಈ ಯೋಜನೆಯ ಜೊತೆಗೆ ಗ್ರಾಮಾಂತರ ಭೂರಹಿತ ಉದ್ಯೋಗ ಯೋಜನೆ ಎಂಬ ಕಾರ್ಯಕ್ರಮ ವನ್ನು (ಆರ್.ಎಲ್.ಇ.ಜಿ.ಪಿ.) 15–8–83 ರಿಂದ ತಂದಿರುತ್ತಾರೆ. ಇದರ ಮೂಲ ಉದ್ದೇಶ; ಗ್ರಾಮಾಂತರ ದಲ್ಲಿರುವ ಕುಟುಂಬಗಳಿಗೆ ವಾರ್ಷಿಕ 100 ದಿನಸನಾದರೂ ಉದ್ಯೋಗವನ್ನು ಒದಗಿಸುವುದು. ಇದರ ವೆಚ್ಚವನ್ನು ಕೇಂದ್ರ ಸರ್ಕಾರವೇ ಪೂರ್ಣ ಪ್ರಮಾಣದಲ್ಲಿ ಭರಿಸು ತ್ತಿತ್ತು.

1989-90ನೇ ಸಾಲಿನಿಂದ ಮೇಲಿನ ಎನ್.ಆರ್. ಇ.ಪಿ. ಮತ್ತು ಆರ್.ಎಲ್.ಇ.ಜಿ.ಪಿ. ಯೋಜನೆಯನ್ನು ಒಂದುಗೂಡಿಸಿ ಜವಾಹರ್ ಉದ್ಯೋಗ ಯೋಜನೆ ಎಂಬ ಕಾರ್ಯಕ್ರಮವನ್ನು ದಿನಾಂಕ 1–4–1989 ರಿಂದ ಜಾರಿಗೆ ತಂದಿರುತ್ತಾರೆ. ಇದರ ವೆಚ್ಚವನ್ನು ಕೇಂದ್ರ ಮತ್ತು ರಾಜ್ಯ ಸರ್ಕಾರದವರು ಕ್ರಮವಾಗಿ ಶೇ. 80 : 20ರ ಪ್ರಮಾಣದಲ್ಲಿ ಭರಿಸುತ್ತಾರೆ. ಹಾಗೂ ಅನುದಾನದಲಿ ಶೇ. 80 ಭಾಗವನ್ನು ಮಂಡಲ ಪಂಚಾಯಿತಿಯವರ ಮೂಲಕ ಕಾಮಗಾರಿಯನ್ನು ಅನುಷ್ಠಾನ ಗೊಳಿಸಲಾಗು ತ್ತಿದೆ. ಉಳಿದ ಶೇ. 20 ಭಾಗವನ್ನು ಜಿಲ್ಲಾ ಪರಿಷತ್ ನಿಂದ ಅನುಷ್ಠಾನಗೊಳಿಸಲಾಗುತ್ತಿದೆ.

ಜವಾಹರ್ ರೋಜಗಾರ್ ಯೋಜನೆಯಲ್ಲಿ 1989–90ನೇ ಸಾಲಿನಲ್ಲಿ ಕೂಲಿ ಮತ್ತು ಸಾಮಗ್ರಿಗಳಿಗೆ ಶೇಕಡಾ 50 : 50 ಇದ್ದುದನ್ನು 1990–91ನೇ ಸಾಲಿನಲ್ಲಿ ಶೇಕಡಾ 60 : 40ಕ್ಕೆ ನಿಗದಿ ಪಡಿಸಲಾಗಿದೆ. ಈ ಯೋಜನೆಗೆ ಗ್ರಾಮಾಂತರ ಪ್ರದೇಶದಲ್ಲಿರುವ ಜನರಿಗೆ ಕನಿಷ್ಟ ಪಕ್ಷ ವರ್ಷದಲ್ಲಿ ನೂರು ದಿವಸ ಉದ್ಯೋಗ ಒದಗಿಸುವುದಾಗಿದೆ. ಈ ಯೋಜನೆಯಲ್ಲಿ ಮಂಡಲ ಪಂಚಾಯಿತಿಗೆ ಲಭ್ಯವಿರುವ ಅನುದಾನದಲ್ಲಿ ಅವರೇ ಕ್ರಿಯಾ ಯೋಜನೆಯನ್ನು ತಯಾರಿಸಿ, ಅದರಂತೆ ಕಾಮಗಾರಿಗಳನ್ನು ತಾಂತ್ರಿಕ ಇಲಾಖೆಯ ಮೇಲ್ವಿಚಾರಣೆ ಯಲ್ಲಿ ಅನುಷ್ಠಾನಗೊಳಿಸಲಾಗುತ್ತದೆ. ಕೂಲಿಗಾಗಿ ವೇತನದಲ್ಲಿ ಒಂದು ಮಾನವ ದಿನಕ್ಕೆ ಒಂದೂವರೆ ಕೆ. ಜಿ. ಯಂತೆ ಆಹಾರ ಧಾನ್ಯವನ್ನು (ಅಕ್ಕಿ, ಗೋಧಿ) ಅತ್ಯಂತ ಕಡಿಮೆ ದರದಲ್ಲಿ ವಿತರಿಸಲಾಗುತ್ತದೆ.

ಜಿಲ್ಲಾ ಪರಿಷತ್‌ನಿಂದ ಒಟ್ಟು 19,753 ಕಾಮಗಾರಿ ಗಳನ್ನು ತೆಗೆದುಕೊಂಡಿದ್ದು 31–3–90ರ ಅಂತ್ಯಕ್ಕೆ 9,355 ಕಾಮಗಾರಿಗಳು ಪೂರ್ಣಗೊಂಡಿರುತ್ತದೆ. ಉಳಿದ 10,398 ಕಾಮಗಾರಿಗಳು ವಿವಿಧ ಹಂತದಲ್ಲಿದ್ದವು. ಮಾರ್ಚಿ 1990ರ ಅಂತ್ಯಕ್ಕೆ 414.817 ಲಕ್ಷ ರೂ.ಗಳು ಖರ್ಚಾಗಿದ್ದು 16·395 ಲಕ್ಷ ರೂ. ಮಾನವ ದಿನಗಳು ಉತ್ಪತ್ತಿಯಾಗಿರುತ್ತದೆ. ಹಾಗೂ 1,706.8 ಮೆಟ್ರಿಕ್ ಟನ್ ಆಹಾರ ಧಾನ್ಯಗಳನ್ನು ಉಪಯೋಗಿಸಲಾಗಿದೆ.

ಮಂಡಲ ಪಂಚಾಯತಿಯಿಂದ ಒಟ್ಟು 5,505 ಕಾಮಗಾರಿಗಳನ್ನು ತೆಗೆದುಕೊಂಡಿದ್ದು 31–3–1990ರ

ಅಂತ್ಯಕ್ಕೆ 2,371 ಕಾಮಗಾರಿಗಳು ಪೂರ್ಣಗೊಂಡಿರುತ್ತವೆ ಉಳಿದ 3,134 ಕಾಮಗಾರಿಗಳು ವಿವಿಧ ಹಂತದಲ್ಲಿದ್ದವು ಮಾರ್ಚಿ 1990ರ ಅಂತ್ಯಕೆ 447·112 ಲಕ್ಷ ರೂ. ಗಳು ಖರ್ಚಾಗಿದ್ದು 13·556 ಲಕ್ಷ ಮಾನವ ದಿನಗಳು ಉತ್ಪತ್ತಿಯಾಗಿರುತ್ತದೆ ಹಾಗೂ 1974·9 ಮೆಟ್ರಿಕ್ ಟನ್ ಆಹಾರ ಧಾನ್ಯಗಳನ್ನು ವಿತರಿಸಲಾಗಿದೆ.

## ಪಶ್ಚಿಮ ಘಟ್ಟ ಅಭಿವೃದ್ಧಿ ಯೋಜನೆ

ಈ ಯೋಜನೆಯು ಮೈಸೂರು ಜಿಲ್ಲೆಗೆ 1984–85 ರಲ್ಲಿ ಮಂಜೂರಾಗಿದ್ದು, ಜಿಲ್ಲೆಯ ಎರಡು ತಾಲ್ಲೂಕು (ಅಂದರೆ ಗುಂಡ್ಲುಪೇಟೆ ಮತ್ತು ಹೆಗ್ಗಡದೇವನಕೋಟೆ) ಗಳಲ್ಲಿ ಮಾತ್ರ ಕಾರ್ಯಗತ ಗೊಳಿಸಲಾಗುತ್ತಿದೆ. ಸದರಿ ಯೋಜನೆಯ ಉದ್ದೇಶ ಗುಡ್ಡಗಾಡು ಪ್ರದೇಶಗಳ ಅಭಿವೃದ್ಧಿ. 1989–90 ರಲ್ಲಿ ಈ ಯೋಜನೆಯಲ್ಲಿ 39·80 ಲಕ್ಷ ರೂ.ಅನುದಾನ ಸರ್ಕಾರದಿಂದ ಬಿಡುಗಡೆ ಆಗಿದ್ದು ಇದರಲ್ಲಿ 36·483 ಲಕ್ಷ ರೂ.ಗಳು ಖರ್ಚಾಗಿರುತ್ತೆ. ಸದರಿ ಯೋಜನೆಯ ಭೌತಿಕ ಗುರಿ ಮತ್ತು ಸಾಧನೆ ಈ ರೀತಿ ಇದೆ.

| | ಗುರಿ | ಸಾಧನೆ |
|---|---|---|
| 1. ಕಾಲು ಸೇತುವೆಗಳ ನಿರ್ಮಾಣ | 3 | 3 |
| 2. ಸಣ್ಣ ನೀರಾವರಿ | 2 | 1 |
| 3. ಭೂ ಸಾರ ಸಂರಕ್ಷಣೆ | 3 | — |
| 4. ಪಶು ಸಂಗೋಪನೆ | 4 | 1 |
| 5. ಮೀನುಗಾರಿಕೆ | 4 | 4 |
| 6. ತೋಟಗಾರಿಕೆ | 5 | 5 |
| 7. ರೇಷ್ಮೆ | 1 | 1 |
| 8. ಅರಣ್ಯ ಮತ್ತು ಸಾಮಾಜಿಕ ಅರಣ್ಯ | 63 | 63 |
| | 85 | 78 |

## 20. ಹುಡ್ಕೊ ಯೋಜನೆ

ಈ ಯೋಜನೆಯು 1978–79 ರಿಂದ ಜಾರಿಯಲ್ಲಿರುತ್ತದೆ. 1989–90ನೇ ಸಾಲಿಗೆ ಜನತಾ ವಸತಿ ಯೋಜನೆಯಡಿ 2562 ಸಾಮಾನ್ಯ, 2054 ವಿಶೇಷ ಘಟಕ ಒಟ್ಟು 4616 ಹುಡ್ಕೊ ನೆರವಿನ ಮನೆಗಳು ಮೈಸೂರು ಜಿಲ್ಲೆಗೆ ಮಂಜೂರಾಗಿದ್ದು ಈ ಮನೆಗಳನ್ನು ಡಿ9 ಜವಯೋ 135 : 89–90 ದಿನಾಂಕ 7–3–90ರಂತೆ ತಾಲ್ಲೂಕುಗಳಿಗೆ ಮರು ಬಿಡುಗಡೆ ಮಾಡಲಾಗಿದೆ. ದಿನಾಂಕ 1-4-1989ಕ್ಕೆ ಪೂರ್ಣಗೊಳ್ಳಲು ಬಾಕಿ ಉಳಿದಿದ್ದ 10,656 ಮನೆಗಳ ಪೈಕಿ 1,182 ಮನೆಗಳು 1989–90ನೇ ಸಾಲಿನಲ್ಲಿ ಪೂರ್ಣಗೊಂಡಿದ್ದು 14,090 ಮನೆಗಳು ದಿನಾಂಕ 1–4–90ಕ್ಕೆ ಪೂರ್ಣ ಗೊಳ್ಳಲು ಬಾಕಿ ಉಳಿದಿರುತ್ತದೆ. ತಾಲ್ಲೋಕುವಾರು ಹಾಗೂ ಯೋಜನಾವಾರು ವಿವರ ಈ ರೀತಿ ಇದೆ.

| ಕ್ರಮ ಸಂಖ್ಯೆ | ತಾಲ್ಲೋಕು | ಕಡಿಮೆ ವೆಚ್ಚದ ಮನೆಗಳು | ಹುಡ್ಕೊ ಆರ್ಥಿಕ ನೆರವಿನ ಮನೆಗಳು | ಗಿರಿಜನ ಉಪ ಯೋಜನೆ | ಒಟ್ಟು |
|---|---|---|---|---|---|
| 1. | ಮೈಸೂರು | 159 | 1256 | — | 1415 |
| 2. | ಟಿ. ನರಸೀಪುರ | 182 | 1597 | — | 1779 |
| 3. | ಕೊಳ್ಳೇಗಾಲ | 182 | 1463 | 37 | 1682 |
| 4. | ನಂಜನಗೂಡು | 205 | 1536 | 5 | 1746 |
| 5. | ಚಾಮರಾಜನಗರ | 202 | 1629 | 25 | 1856 |
| 6. | ಗುಂಡ್ಲುಪೇಟೆ | 132 | 927 | 11 | 1070 |
| 7. | ಯಳಂದೂರು | 62 | 428 | — | 490 |
| 8. | ಹುಣಸೂರು | 121 | 713 | 4 | 838 |
| 9. | ಕೆ. ಆರ್. ನಗರ | 49 | 1029 | — | 1078 |
| 10 | ಹೆಚ್. ಡಿ. ಕೋಟೆ | 161 | 1043 | 47 | 1251 |
| 11. | ಪಿರಿಯಾಪಟ್ಟಣ | 121 | 744 | 20 | 885 |
| | ಒಟ್ಟು | 1576 | 12365 | 149 | 14090 |

1989–90ನೇ ಸಾಲಿನಲ್ಲಿ ಮನೆಯ ವೆಚ್ಚ 8000–00 ರೂ. ಗಳಿರುತ್ತದೆ. ವಿವರ ಈ ಕೆಳಕಂಡಂತಿರುತ್ತದೆ.

| | | |
|---|---|---|
| 1. | ಸಾಲ (ಹುಡ್ಕೊ ನೆರವು) | 4000–00 ರೂ. |
| 2. | ಸಹಾಯಧನ (ಸರ್ಕಾರದಿಂದ) | 2500–00 ರೂ. |
| 3. | ಫಲಾನುಭವಿಯ ಕೊಡುಗೆ | 1500–00 ರೂ. |
| | ಒಟ್ಟು | 8000–00 ರೂ. |

ಫಲಾನುಭವಿಗಳ ಆಯ್ಕೆಯನ್ನು ಮಂಡಲಪಂಚಾಯತಿ ಆಯ್ಕೆ ಮಾಡಬೇಕಿರುತ್ತದೆ.

## ಟ್ರೈಸಂ

1989-90ನೇ ಸಾಲಿನಲ್ಲಿ ಈ ಯೋಜನೆಯಡಿಯಲ್ಲಿ 466 ಗ್ರಾಮೀಣ ಯುವಕ ಯುವತಿಯರಿಗೆ ವಿವಿಧ ಕಸಬುಗಳಲ್ಲಿ ತರಬೇತಿ ನೀಡಲಾಗಿದೆ 3 ಜನರು ಬ್ಯಾಂಕಿನ ಸಾಲ ಹಾಗೂ ಸಹಾಯಧನವನ್ನು ಪಡೆದು ಸ್ವಂತ ಉದ್ಯಮವನ್ನು ಕೈಗೊಂಡಿರುತ್ತಾರೆ. ಈ ಯೋಜನೆಯಲ್ಲಿ ಫಲಾನುಭವಿಗಳಿಗೆ ಅನುಕೂಲವಾಗುವಂತೆ ಶಿಷ್ಯವೇತನ., ತರಬೇತಿ ವೆಚ್ಚ ಹಾಗೂ ಕಚ್ಚಾಮಾಲು ಮತ್ತು ಸಹಾಯ ಧನಕ್ಕೆ ಒಟ್ಟು 5·75 ಲಕ್ಷ ರೂ. ಖರ್ಚು ಮಾಡಲಾಗಿದೆ.

## 21. ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ (ಖಾದಿ ಮತ್ತು ಗ್ರಾಮೋದ್ಯಮ ವಿಭಾಗ)

ಮೈಸೂರು ಜಿಲ್ಲೆಯಲ್ಲಿ ಕೈಗಾರಿಕಾಭಿವೃದ್ಧಿ ಅದರಲ್ಲೂ ಗ್ರಾಮೀಣ ಪ್ರದೇಶದಲ್ಲಿ ಗುಡಿ ಕೈಗಾರಿಕೆಗಳನ್ನು ಹಾಗೂ ಸಣ್ಣ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಸಹಾಯ ಮಾಡುವುದು ಮತ್ತು ವಿವಿಧ ಕಸಬುಗಳ ಕುಶಲ ಕರ್ಮಿಗಳಿಗೆ ವಿವಿಧ ರೀತಿಯ ಸಹಾಯವನ್ನು ಒದಗಿಸಿ ನಿರುದ್ಯೋಗತನವನ್ನು ಹೋಗಲಾಡಿಸುವುದು ಜಿಲ್ಲಾ ಪರಿಷತ್ತಿನ ಕೈಗಾರಿಕೆ ವಿಭಾಗದ ಮುಖ್ಯ ಉದ್ದೇಶಗಳು.

ಜಿಲ್ಲೆಯಲ್ಲಿರುವ ಕೈಗಾರಿಕಾ ಸಹಕಾರ ಸಂಘಗಳನ್ನು ಪ್ರೋತ್ಸಾಹಿಸಲು ವಿವಿಧ ರೀತಿಯ ಸಹಾಯವನ್ನು ಒದಗಿಸಲಾಗಿದೆ. 1989-90ನೇ ಸಾಲಿನಲ್ಲಿ ಮೂರು ಪ್ರಾಥಮಿಕ ಕೈಮಗ್ಗಗಳ ಕೈಗಾರಿಕಾ ಸಹಕಾರ ಸಂಘಗಳಿಗಾಗಿ 0·054 ಲಕ್ಷ ರೂ.ಗಳು ಉಸ್ತುವಾರಿ ಅನುದಾನವನ್ನಾಗಿ ನೀಡಲಾಗಿದೆ.

ಐದು ಪ್ರಾಥಮಿಕ ಕೈಮಗ್ಗ ನೇಕಾರರ ಸಹಕಾರ ಸಂಘಗಳಿಗೆ ಹೊಸದಾಗಿ ಷೇರುದಾರರಾಗ ಬಯಸುವ ಸದಸ್ಯರಿಗೆ 0·15 ಲಕ್ಷ ರೂ.ಗಳ ಷೇರು ಸಾಲವನ್ನು ನೀಡಲಾಗಿದೆ. ಇದರಿಂದ 167 ಜನ ಸದಸ್ಯರಿಗೆ ಸಹಾಯವಾಗಿದೆ.

ಕೊಳ್ಳೇಗಾಲ ತಾಲ್ಲೂಕಿನ ಹನೂರಿನಲ್ಲಿರುವ ಮೇ. ಚೌಡೇಶ್ವರಿ ಕೈಮಗ್ಗ ನೇಕಾರರ ಸಹಕಾರ ಸಂಘಕ್ಕೆ ಒಂದು ಸಾಮೂಹಿಕ ಕಾರ್ಯಗಾರವನ್ನು ನಿರ್ಮಿಸಲು 2·00 ಲಕ್ಷ ರೂ. ಗಳನ್ನು ಸಾಲದ ರೂಪದಲ್ಲಿ ಮಂಜೂರು ಮಾಡಿದೆ. ಇದರಿಂದ ಸುಮಾರು 30 ಮಗ್ಗಗಳನ್ನು ಒಂದೇ ಕೇಂದ್ರದಲ್ಲಿ ಅಳವಡಿಸಿ ನವೀನ ಮಾದರಿಯ ಬಟ್ಟೆಗಳನ್ನು ತಯಾರಿಸಲು ನೇಕಾರರಿಗೆ ಸಹಾಯವಾಗುತ್ತದೆ.

ಚಾಮರಾಜನಗರ ತಾಲ್ಲೋಕಿನ ಉಮ್ಮತ್ತೂರಿನಲ್ಲಿ ತೆಂಗಿನನಾರಿನ ಕುಶಲ ಕರ್ಮಿಗಳಿಗೆ ಮತ್ತು ಪಿರಿಯಾಪಟ್ಟಣ ತಾಲ್ಲೋಕಿನ ಹೊನ್ನಾಪುರ ಗ್ರಾಮದಲ್ಲಿ ಬಿದರಿನ ಕುಶಲ ಕರ್ಮಿಗಳಿಗೆ ಸಾಮಾನ್ಯ ಕಾರ್ಯಗಾರಗಳನ್ನು ನಿರ್ಮಿಸಲು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಗೆ 1·00 ಲಕ್ಷ ರೂ· ಗಳನ್ನು, ಜೇನು ಕೃಷಿಯನ್ನು ಅಭಿವೃದ್ಧಿ ಪಡಿಸುತ್ತಿರುವ ಸಿಬ್ಬಂದಿಗೆ 0·66 ಲಕ್ಷ ರೂಗಳನ್ನು ವೇತನಕ್ಕಾಗಿ ನೀಡಲಾಗಿದೆ.

ಗ್ರಾಮಾಂತರ ಪ್ರದೇಶಗಳಲ್ಲಿ ಸ್ಥಾಪನೆಯಾಗುವ ಅತೀ ಸಣ್ಣ ಕೈಗಾರಿಕೆಗಳಿಗಾಗಿ ಪ್ರವರ್ತಕರ ಪಾಲಿನ ವಂತಿಕೆಯನ್ನು ಭರಿಸುವಲ್ಲಿ ನೀಡಲಾಗುವ ಬೀಜಧನ ಸಾಲವನ್ನು 12 ಅತಿಸಣ್ಣ ಕೈಗಾರಿಕೆಗಳಿಗೆ 4·91 ಲಕ್ಷ ರೂ. ವೆಚ್ಚದಲ್ಲಿ ನೀಡಲಾಗಿದೆ.

ಯೋಜನೇತರ ಕಾರ್ಯಕ್ರಮದಲ್ಲಿ ಹುಣಸೂರಿನಲ್ಲಿರುವ ಗ್ರಾಮಾಂತರ ಕೈಗಾರಿಕಾಭಿವೃದ್ಧಿ ಕೇಂದ್ರದಲ್ಲಿ 33 ಅಭ್ಯರ್ಥಿಗಳಿಗೆ ಎಲೆಕ್ಟ್ರಿಷಿಯನ್, ಫಿಟ್ಟರ್, ಮೆಷಿನಿಸ್ಟ್, ಷೀಟ್ ಮೆಟಲ್ ಮತ್ತು ಮರಗೆಲಸ ಕಸಬುಗಳಲ್ಲಿ ಎರಡನೆ ವರ್ಷದ ತರಬೇತಿ ಪಡೆದಿರುತ್ತಾರೆ.

ವಿಶೇಷ ಘಟಕ ಯೋಜನೆಯಲ್ಲಿ ಕೈಗಾರಿಕಾ ಸೇವಾ ಮತ್ತು ವ್ಯಾಪಾರ ಘಟಕಗಳನ್ನು ಸ್ಥಾಪಿಸಲು 233 ಫಲಾನುಭವಿಗಳಿಗೆ ಶೇ 60 ರಷ್ಟು ಸಹಾಯಧನವಾಗಿ 9·23 ಲಕ್ಷ ರೂ. ಗಳನ್ನು ವಿವಿಧ ಬ್ಯಾಂಕುಗಳಿಂದ ಬಿಡುಗಡೆ ಮಾಡಲಾಗಿದೆ.

ಗಿರಿಜನ ಉಪಯೋಜನೆಯನ್ವಯ, ಹೆಚ್.ಡಿ. ಕೋಟೆ ತಾಲ್ಲೋಕಿನ ಬೀಚನಹಳ್ಳಿಯಲ್ಲಿ 8 ಜನರಿಗೆ ಮರಗೆಲಸದಲ್ಲೂ ಮತ್ತು 80 ಜನರಿಗೆ ಹತ್ತಿ ಮತ್ತು ರೇಷ್ಮೆ ನೇಯ್ಗೆಯಲ್ಲಿ ತರಬೇತಿ ನೀಡಲಾಗುತ್ತಿದೆ. ತರಬೇತಿ ಕಾರ್ಯಕ್ರಮವನ್ನು ಕರ್ನಾಟಕ ರಾಜ್ಯ ಕೈಮಗ್ಗ ಅಭಿವೃದ್ಧಿ ನಿಗಮದೊಂದಿಗೆ ನಡೆಸಲಾಗುತ್ತಿದೆ. ಈ ತರಬೇತಿ ಕಾರ್ಯಕ್ರಮವು ವಿವಿಧ ಹಂತದಲ್ಲಿದೆ.

ಕಾಡಾ ಯೋಜನೆಯಲ್ಲಿ ಟಿ. ನರಸೀಪುರ ತಾಲ್ಲೋಕಿನ ಮಾವಿನಹಳ್ಳಿಯಲ್ಲಿ ತೆಂಗಿನನಾರಿನ ಅಭಿವೃದ್ಧಿ ನಿಗಮದ ಸಹಯೋಗದೊಂದಿಗೆ 10 ಜನರಿಗೆ ಹಗ್ಗ ತಯಾರಿಕೆಯಲ್ಲಿ ತರಬೇತಿ ನೀಡಲಾಗಿದೆ.

ಇವುಗಳ ಜೊತೆಗೆ ಭಾವಿ ಉದ್ಯಮಶೀಲದಲ್ಲಿ ಕೈಗಾರಿಕಾ ಜಾಗೃತಿ ಹುಟ್ಟಿಸಲು ಕೆಲವು ತಾಲ್ಲೋಕು ಮಟ್ಟದಲ್ಲಿ ಹಾಗೂ ಕೆಲವು ಮಂಡಲಗಳಲ್ಲಿ, ಜಿಲ್ಲಾ ಕೈಗಾರಿಕಾ ಕೇಂದ್ರ, ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ, ಟೆಕ್ಸಾಕ್ ಸಂಸ್ಥೆಯೊಂದಿಗೆ ಕೈಗಾರಿಕಾ ಆಂದೋಲನಗಳನ್ನು ನಡೆಸಲಾಗಿದೆ. ಮೈಸೂರು ನಗರದಲ್ಲಿ ಜಿಲ್ಲಾ ಮಟ್ಟದಲ್ಲಿ 6 ವಾರಗಳ ಕಾಲದ ಉದ್ಯಮಶೀಲ ಅಭಿವೃದ್ಧಿ ಕಾರ್ಯಕ್ರಮ ಸಹಾ ನಡೆಸಲಾಗಿದೆ. ಇದರಲ್ಲಿ 30 ಜನ ಭಾವಿ ಉದ್ಯಮಶೀಲರಿಗೆ ಕೈಗಾರಿಕೆಗಳ ಸ್ಥಾಪನೆ ಮತ್ತು ನಿರ್ವಹಣೆ ಬಗ್ಗೆ ತರಬೇತಿ ನೀಡಲಾಗಿದೆ,

ಜಿಲ್ಲಾ ಕೈಗಾರಿಕಾ ಕೇಂದ್ರ, ಮೈಸೂರು, 89–90ನೇ ಸಾಲಿನಲ್ಲಿ ಜಿಲ್ಲಾದ್ಯಂತ 785 ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಸಹಾಯಮಾಡಿದ್ದು ಇದರಿಂದ ಸುಮಾರು 4104 ಜನರಿಗೆ ಉದ್ಯೋಗಾವಕಾಶವನ್ನು ಒದಗಿಸಲಾಗಿದೆ. ಸ್ವಯಂ ಉದ್ಯೋಗ ಯೋಜನೆಯಲ್ಲಿ ಜಿಲ್ಲಾ ಕೈಗಾರಿಕಾ ಕೇಂದ್ರವು 349 ಜನರಿಗೆ ಸಹಾಯವನ್ನು ಕಲ್ಪಿಸಿದೆ. ಇದರೊಂದಿಗೆ ಜಿಲ್ಲೆಯಲ್ಲಿ ಸ್ಥಾಪಿತವಾಗುವ ಸಣ್ಣ ಕೈಗಾರಿಕೆಗಳಿಗೆ ಸರ್ಕಾರದ ಪ್ರೋತ್ಸಾಹ ಮತ್ತು ರಿಯಾಯಿತಿಗಳನ್ನು ಮತ್ತು ಕಚ್ಚಾವಸ್ತುಗಳನ್ನು ಸಹ ಅಗತ್ಯವಾದ ಕಡೆ ನೀಡುತ್ತಾ ಬಂದಿದೆ.

Roads and

## 22. ರಸ್ತೆ ಮತ್ತು ಕಟ್ಟಡಗಳು

ಜಿಲ್ಲಾ ಪರಿಷತ್ ಆಧೀನದಲ್ಲಿ ಬರುವ ಇತರ ಜಿಲ್ಲಾ ರಸ್ತೆಗಳು, ಗ್ರಾಮಾಂತರ ರಸ್ತೆಗಳು ಮತ್ತು ಸಕ್ಕರೆ ಕಾರ್ಖಾನೆಗೆ ಸಂಬಂಧಪಟ್ಟ ರಸ್ತೆಗಳೂ ಅಲ್ಲದೇ ಈ ಹಿಂದೆ ತಾಲ್ಲೋಕು ಬೋರ್ಡು ಮತ್ತು ಅಭಿವೃದ್ಧಿ ಕಾರ್ಯಕ್ರಮಗಳಡಿಯಲ್ಲಿ ನಿರ್ಮಿಸಿರುವ (ರಾಷ್ಟ್ರೀಯ ಗ್ರಾಮಾಂತರ ಉದ್ಯೋಗ ಭರವಸೆ ಕಾರ್ಯಕ್ರಮ ಮತ್ತು ರಾಷ್ಟ್ರೀಯ ಭೂರಹಿತ ಉದ್ಯೋಗ ಭರವಸೆ ಕಾರ್ಯಕ್ರಮ) ರಸ್ತೆಗಳ ದುರಸ್ತಿ ಮತ್ತು ಮೇಲ್ವಿಚಾರಣೆಯನ್ನು ಜಿಲ್ಲಾ ಪರಿಷತ್ತು ನಡೆಸಿಕೊಂಡು ಬಂದಿದೆ. ನಮ್ಮ ಜಿಲ್ಲಾ ಪರಿಷತ್ ವ್ಯಾಪ್ತಿಯಲ್ಲಿ ಸುಮಾರು 4678 ಕಿ. ಮೀ. ಉದ್ದದ ಜಿಲ್ಲಾ ರಸ್ತೆಗಳು ಮತ್ತು 3,397 ಕಿ. ಮೀ. ಉದ್ದದ ಗ್ರಾಮಾಂತರ ರಸ್ತೆಗಳು ಬರುವುದರಿಂದ ಈ ಎಲ್ಲಾ ರಸ್ತೆಗಳ ಸಂಪೂರ್ಣ ಅಭಿವೃದ್ಧಿಯನ್ನು ಮಾಡಲು ಬಹಳಷ್ಟು ಹಣವು ಬೇಕಾಗಿದ್ದು ಈ ಬಗ್ಗೆ ವರ್ಷಪೂರ್ತಿ ಅಭಿವೃದ್ಧಿ ಮತ್ತು ದುರಸ್ತಿ ಮಾಡುವ ಕಾರ್ಯಕ್ರಮಕ್ಕಾಗಿಯೇ ಸುಮಾರು 1·80 ಲಕ್ಷ ರೂ.ಗಳಷ್ಟು ಹಣವನ್ನು 89-90ನೇ ಸಾಲಿನಲ್ಲಿ ಖರ್ಚು ಮಾಡಲಾಗಿದೆ. ಈ ಖರ್ಚಿನಲ್ಲಿ 88–89ನೇ ವರ್ಷದಲ್ಲಿ ಮಾಡಲಾಗಿದ್ದ ರಸ್ತೆ ದುರಸ್ತಿಯ ಬಾಕಿ ಉಳಿದಿರುವ ಸುಮಾರು 5.00 ಲಕ್ಷ ರೂ. ಗಳಷ್ಟು ಬಾಕಿ ಬಿಲ್ಲುಗಳನ್ನು ಸಹಾ ಕೊಡಲಾಗಿದೆ.

### ಕಟ್ಟಡಗಳು

ಜಿಲ್ಲಾ ಪರಿಷತ್ತಿನ ವರದಿಯಲ್ಲಿ ಬರುವ ಸರ್ಕಾರಿ ಕಟ್ಟಡಗಳ ಸಂಖ್ಯೆಯು ಬಹಳ ಜಾಸ್ತಿಯಾಗಿದ್ದು ಈ ಎಲ್ಲಾ ಕಟ್ಟಡಗಳ ನಿರ್ವಹಣೆಯನ್ನು ಜಿಲ್ಲಾ ಪರಿಷತ್ ಒಂದೇ ಸಮನಾಗಿ ಮಾಡುವುದು ಅಸಾಧ್ಯವಾಗಿರುತ್ತದೆ. ಆದಕ್ಕಾಗಿ ಈ ಕಟ್ಟಡಗಳ ನಿರ್ವಹಣೆಗೆ ಕೊಟ್ಟಿರುವ

14·85 ಲಕ್ಷ ರೂ.ಗಳ ಅನುದಾನವನ್ನು ಪೂರ್ತಿ ಖರ್ಚು ಮಾಡಿ ಸರ್ಕಾರಿ ಕಟ್ಟಡಗಳ ರಿಪೇರಿಯನ್ನು ಮಾಡಲಾಗಿದೆ. ಇದಲ್ಲದೇ ವಿಶೇಷವಾಗಿ ಶಾಲಾ ಕಟ್ಟಡಗಳ ದುರಸ್ತಿಗಾಗಿಯೇ ಹಣ ಲಭ್ಯವಿಲ್ಲದ ಕಾರಣ ಯೋಜನೆಯಲ್ಲಿ ಉಳಿದಿರುವ ಹಣವನ್ನು ಈ ಶಾಲಾ ಕಟ್ಟಡಗಳ ದುರಸ್ತಿಗಾಗಿ ಖರ್ಚು ಮಾಡಲಾಗಿದೆ.

### ಗ್ರಾಮ ನೈರ್ಮಲ್ಯ

1989–90ನೇ ಸಾಲಿನಲ್ಲಿ ಸಾಮೂಹಿಕ ಶೌಚಾಲಯಗಳ ನಿರ್ಮಾಣವನ್ನು ಕೈಗೆತ್ತಿಕೊಳ್ಳಲಾಗಲಿಲ್ಲ. ಕಾರಣ ಇದಕ್ಕೆ ಬದಲಾಗಿ ಯುನಿಸೆಫ್‌ವತಿಯಿಂದ ಆರಿಸಿದ ಗ್ರಾಮಗಳಲ್ಲಿ ಪ್ರತ್ಯೇಕ 8050 ಶೌಚಾಲಯ ಕಟ್ಟಗಳನ್ನು ಕಟ್ಟಲಾಗಿದೆ.

## 23. ಗಣಿ ಮತ್ತು ಭೂ ವಿಜ್ಞಾನ

### ಭೂ ವೈಜ್ಞಾನಿಕ ಮತ್ತು ಭೂ ಭೌತಶಾಸ್ತ್ರದ ತಾಂತ್ರಿಕ ಸಲಹೆ

1989–90ನೇ ಸಾಲಿನಲ್ಲಿ ವಿವಿಧ ಯೋಜನೆಯಡಿ ವ್ಯವಸಾಯ ಮತ್ತು ವ್ಯವಸಾಯೇತರ ಉದ್ದೇಶಗಳಿಗೆ ಕೊಳವೆ ಬಾವಿ, ತೋಡು ಬಾವಿ ಸ್ಥಳಾಯ್ಕೆಗಾಗಿ ಒಟ್ಟು 1302 ಅರ್ಜಿದಾರರುಗಳ ಸ್ಥಳಗಳನ್ನು ಭೂ ವೈಜ್ಞಾನಿಕ ಪರೀಕ್ಷೆ ನಡೆಸಿ ಇವುಗಳಲ್ಲಿ 606 ಅರ್ಜಿದಾರರುಗಳ ಸ್ಥಳಾಯ್ಕೆ ಮಾಡಿ ತಾಂತ್ರಿಕ ಸಲಹೆ ಕೊಡಲಾಯಿತು. ಉಳಿದ ಅರ್ಜಿದಾರರುಗಳ ಸ್ಥಳಗಳು ಬಾವಿಗಾಗಿ ಯೋಗ್ಯವಾಗಿರುವುದಿಲ್ಲ. ಹಾಗೂ 99 ಅರ್ಜಿದಾರರುಗಳ ಸ್ಥಳಗಳನ್ನು ಭೂ ಭೌತಶಾಸ್ತ್ರಕ್ಕೆ ಅನುಗುಣವಾಗಿ ಪರೀಕ್ಷೆ ನಡೆಸಿ 49 ಬಾವಿಗಳಿಗೆ ಸ್ಥಳಾಯ್ಕೆ ಮಾಡಲಾಯಿತು. ಉಳಿದ ಅರ್ಜಿದಾರರುಗಳ ಸ್ಥಳಗಳು ಬಾವಿಗಾಗಿ ಯೋಗ್ಯವಾಗಿರುವುದಿಲ್ಲ.

### ವಿಫಲ ಬಾವಿ ತಪಾಸಣೆ

ಇದೇ ಸಾಲಿನಲ್ಲಿ ಜಿಲ್ಲೆಯಲ್ಲಿ ಒಟ್ಟು 336 ವಿಫಲ ಬಾವಿ ಜಂಟೀ ತಪಾಸಣೆ ನಡೆಸಿ ಸಂಬಂಧಪಟ್ಟ ಬ್ಯಾಂಕುಗಳಿಗೆ ಸಲಹೆ ಕೊಡಲಾಯಿತು.

### ವೀಕ್ಷಣಾ ಬಾವಿಗಳ ಜಲಮಟ್ಟ ಮಾಪನ

ಜಿಲ್ಲೆಯಲ್ಲಿ ಒಟ್ಟು 87 ವೀಕ್ಷಣಾ ಬಾವಿಗಳಿದ್ದು ಅಂತರ್ಜಲ ಮಾಹಿತಿಗಾಗಿ ಪ್ರತಿ ತಿಂಗಳು ಕ್ರಮಬದ್ಧವಾಗಿ ಅಂತರ್ಜಲ ಮಟ್ಟ ಮಾಪನ ಮಾಡಲಾಯಿತು.

### ಅಂತರ್ಜಲ ಪುನರ್ ಮೌಲೀಕರಣ ಮತ್ತು ನೀರಿನ ಮಾದರಿ ಸಂಗ್ರಹಣೆ

1989–90ನೇ ಸಾಲಿನಲ್ಲಿ ಚಾಮರಾಜನಗರ ತಾಲ್ಲೋಕಿನ 1216 ಚ. ಕಿ. ಮೀ. ಕ್ಷೇತ್ರದಲ್ಲಿ 189 ಗ್ರಾಮದ 4113 ಬಾವಿಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಿ ಅಂತರ್ಜಲ ಲಭ್ಯತೆ ಮತ್ತು ಪುನರ್ ಮೌಲೀಕರಣಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲಾಯಿತು. ಹಾಗೂ ಇದೇ ತಾಲ್ಲೋಕಿನ ವಿವಿಧ ಗ್ರಾಮಗಳ ಬಾವಿಗಳಿಂದ ನೀರಿನ ಮಾದರಿಯನ್ನು ವಿಶ್ಲೇಷಣೆಗಾಗಿ ಸಂಗ್ರಹಿಸಲಾಯಿತು.

### ಕೊಳವೆ ಬಾವಿ ಕೊರೆಯುವಿಕೆ ಮತ್ತು ನೀರು ಇಳುವರಿ ಪರೀಕ್ಷೆ

ಇದೇ ಸಾಲಿನಲ್ಲಿ ಇಲಾಖೆಯ ಒಂದು ಮುಂದಗತಿ ಯಂತ್ರದಿಂದ 66.5 ಮಿ ಆಳದ ಒಂದು ಕೊಳವೆಬಾವಿ ಕೊರೆಯಲಾಯಿತು. ಹಾಗೂ ಇಲಾಖಾ ಯಂತ್ರದಿಂದ 65 ಬಾವಿಗಳ ಮತ್ತು ಇತರೆ ಯಂತ್ರದಿಂದ 12 ಬಾವಿಗಳ ನೀರು ಇಳುವರಿ ಪರೀಕ್ಷೆ ಮಾಡಲಾಯಿತು.

### ರಾಜಸ್ವ

ಮೇಲಿನ ಕಾರ್ಯಕ್ರಮಗಳ ಬಗ್ಗೆ 1989–90ನೇ ಸಾಲಿನಲ್ಲಿ 0·46 ಲಕ್ಷ ರೂ. ಗಳ ರಾಜಸ್ವ ಬಂದಿದ್ದು. ಸರ್ಕಾರದ ಲೆಕ್ಕಕ್ಕೆ ಜಮಾ ಮಾಡಲಾಯಿತು.

### ಅನುದಾನ ಮತ್ತು ಖರ್ಚು

1989-90ನೇ ಸಾಲಿನಲ್ಲಿ ಯೋಜನೆಯಡಿ 3·20 ಲಕ್ಷ ರೂ. ಗಳು ಮತ್ತು ಯೋಜನೇತರದಲ್ಲಿ 6·37 ಲಕ್ಷ ರೂ. ಗಳ ಅನುದಾನ ಕೊಡಲಾಗಿದ್ದು ಒಟ್ಟು 7.62 ಲಕ್ಷ ರೂ. ಗಳು ಖರ್ಚಾಗಿರುತ್ತದೆ. ಯೋಜನೇತರ ಬಾಬ್ತು ಬಿಡುಗಡೆಯಾದ ಅನುದಾನ 5·96 ಲಕ್ಷ ರೂ. ಖರ್ಚು 6·13ಲಕ್ಷ ರೂಗಳು ಮತ್ತು ಯೋಜನೆಯಡಿ ಬಿಡುಗಡೆಯಾದ ಅನುದಾನ 1·90 ಲಕ್ಷ ರೂ. ಮತ್ತು ಖರ್ಚು 1·49 ಲಕ್ಷ ರೂ. ಒಟ್ಟು ಬಿಡುಗಡೆ 7·86 ಲಕ್ಷ ರೂ. ಗಳು ಮತ್ತು ಖರ್ಚಾದದ್ದು 7·62 ಲಕ್ಷ ರೂ. ಗಳು.

## 24. ಆಹಾರ ಮತ್ತು ಅಗತ್ಯವಸ್ತುಗಳ ಸರಬರಾಜು

1) ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೂಲ ಉದ್ದೇಶವೇನೆಂದರೆ, ಗ್ರಾಮಾಂತರ ಪ್ರದೇಶಗಳಲ್ಲಿರುವ ಜನಸಾಮಾನ್ಯರಿಗೆ ಮುಖ್ಯವಾಗಿ ದುರ್ಬಲವರ್ಗದ ಜನರಿಗೆ ನಿತ್ಯ ಬಳಕೆಯ ವಸ್ತುಗಳನ್ನು ಅಂದರೆ ಅಕ್ಕಿ, ಗೋಧಿ, ಸಕ್ಕರೆ, ತಾಳೆಎಣ್ಣೆ ಮತ್ತು ಸೀಮೆಎಣ್ಣೆಯನ್ನು ನಿಗದಿತ ಬೆಲೆಗಳಲ್ಲಿ ಒದಗಿಸುವುದೇ ಆಗಿದೆ.

2) ಮೈಸೂರು ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ 2,42,235 ಹಸಿರು ಕಾರ್ಡು ಪಡಿತರ ಚೀಟಿಗಳ ಹಾಗೂ 1,80,901 ಕೇಸರಿ ಪಡಿತರ ಚೀಟಿಗಳ ಫಲಾನುಭವಿಗಳಿರುತ್ತಾರೆ. ಹಸಿರು ಮತ್ತು ಕೇಸರಿ ಪಡಿತರ ಚೀಟಿದಾರರಿಗೆ ವಿತರಣೆ ಮಾಡಲು ಆಹಾರ ನಿರ್ದೇಶಕರು ಏಪ್ರಿಲ್ 1989 ರಿಂದ 1990ನೇ ಮಾರ್ಚ್ ಮಾಹೆಯ ವರೆಗೆ 2775·50 ಟನ್ ಅಕ್ಕಿ,875·50 ಟನ್ ಗೋಧಿ, 739·45 ಟನ್ ಸಕ್ಕರೆ ಮತ್ತು 748 ಟನ್ ತಾಳೆಎಣ್ಣೆ ಹಾಗೂ 16,260 ಕೆ. ಎಲ್. ಸೀಮೆ ಎಣ್ಣೆಯನ್ನು ಬಿಡುಗಡೆ ಮಾಡಿರುತ್ತಾರೆ. ಇವುಗಳನ್ನು ಆಯಾಯ ತಾಲ್ಲೋಕುಗಳಲ್ಲಿರುವ ಹಸಿರು ಮತ್ತು ಕೇಸರಿ ಪಡಿತರ ಚೀಟಿಗಳ ಒಟ್ಟು ಸಂಖ್ಯೆ ಆಧಾರದ ಮೇರೆಗೆ ಮೇಲ್ಕಂಡ ಅಗತ್ಯ ವಸ್ತುಗಳನ್ನು ತಾಲ್ಲೋಕುವಾರು ಜಿಲ್ಲಾ ಪರಿಷತ್ ವತಿಯಿಂದ ಮರುಹಂಚಿಕೆ ಮಾಡಲಾಯಿತು.

3) ಜಿಲ್ಲೆಯಲ್ಲಿರುವ 12 ಸಗಟು ಮಾರಾಟ ಕೇಂದ್ರಗಳಿಂದ ಗ್ರಾಮಾಂತರ ಪ್ರದೇಶಗಳಲ್ಲಿರುವ ನ್ಯಾಯಬೆಲೆ ಅಂಗಡಿಗಳಿಗೆ ಸರ್ಕಾರಿ ವೆಚ್ಚದಲ್ಲಿ ಆಹಾರಧಾನ್ಯಗಳನ್ನು ಸರಬರಾಜು ಮಾಡಲು ಸಾಗಾಣಿಕ ವ್ಯವಸ್ಥೆ ಮಾಡಿ ಸರ್ಕಾರಿ ಅಧಿಕಾರಿಗಳ ಉಸ್ತುವಾರಿಯಲ್ಲಿ ಕಳುಹಿಸಲಾಗುತ್ತಿತ್ತು. 1989-90ನೇ ಸಾಲಿನಲ್ಲಿ ಸಾಗಾಣಿಕಾ ವೆಚ್ಚ 8·71 ಲಕ್ಷ ರೂ. ಗಳು ಖರ್ಚಾಗಿರುತ್ತದೆ.

4) ಈ ಜಿಲ್ಲೆಯ ಐ.ಟಿ.ಡಿ.ಪಿ. ಯೋಜನೆಗೆ ಅನ್ವಯಿಸವ 3 ತಾಲ್ಲೋಕುಗಳ (ಮೈಸೂರು, ಟಿ. ನರಸೀಪುರ ಮತ್ತು ಕೆ. ಆರ್. ನಗರ) ಗ್ರಾಮಾಂತರ ಪ್ರದೇಶದ ಹಸಿರು ಪಡಿತರರಿಗೆ ಕೆ. ಜಿ ಒಂದಕ್ಕೆ ಎರಡು ರೂಪಾಯಿನಂತೆ ತಿಂಗಳೊಂದಕ್ಕೆ 5 ಕೆ. ಜಿ. ಅಕ್ಕಿ, 5 ಕೆ. ಜಿ. ಗೋಧಿ ಸೇರಿಸಿ ಒಟ್ಟು 10 ಕೆ. ಜಿ ಆಹಾರಧಾನ್ಯಗಳನ್ನು ರಿಯಾಯಿತಿ ದರದಲ್ಲಿ ಸರಬರಾಜು ಮಾಡಲಾಗಿದೆ.

5) ಈ ಜಿಲ್ಲೆಯಲ್ಲಿ ಸಮಗ್ರ ಗುಡ್ಡಗಾಡು ಜನಾಂಗ ಅಭಿವೃದ್ಧಿ ಯೋಜನೆಯ (ಐ.ಟಿ.ಡಿ.ಪಿ.) ವ್ಯಾಪ್ತಿಗೆ ಒಳಪಡುವ 8 ತಾಲ್ಲೋಕುಗಳ ಗ್ರಾಮಾಂತರ ಪ್ರದೇಶಗಳಲ್ಲಿರುವ ಹಸಿರು ಪಡಿತರ ಚೀಟಿ ಫಲಾನುಭವಿಗಳಿಗೆ ತಿಂಗಳಿಗೆ ಪ್ರತಿ ಕಾರ್ಡಿಗೆ 10 ಕೆ.ಜಿ. ಅಕ್ಕಿ ಮತ್ತು $1\frac{1}{2}$ ಕೆ. ಜಿ. ಗೋಧಿಯನ್ನು ರಿಯಾಯತಿದರದಲ್ಲಿ ಸರಬರಾಜು ಮಾಡಲಾಗುತ್ತಿದೆ. ಸದರಿ ತಾಲ್ಲೋಕುಗಳ ಗ್ರಾಮಾಂತರ ಪ್ರದೇಶಗಳಲ್ಲಿರುವ ಕೇಸರಿ ಪಡಿತರ ಚೀಟಿದಾರರಿಗೆ ತಿಂಗಳಿಗೆ ಪ್ರತಿ ಕಾರ್ಡಿಗೆ 5 ಕೆ ಜಿ. ಅಕ್ಕಿ, $1\frac{1}{2}$ ಕೆ ಜಿ. ಗೋಧಿಯನ್ನು ರಿಯಾಯತಿ ದರದಲ್ಲಿ ಸರಬರಾಜು ಮಾಡಲಾಗುತ್ತಿದೆ.

6) ಜಿಲ್ಲೆಯಾದ್ಯಂತ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರತಿ ಕಾರ್ಡಿಗೆ (ಹಸಿರು ಮತ್ತು ಕೇಸರಿ) ತಿಂಗಳಿಗೆ ಎರಡು ಕೆ. ಜಿ. ಸಕ್ಕರೆ ಮತ್ತು ತಾಳೆಎಣ್ಣೆಯನ್ನು ಲಭ್ಯವಿರುವ ದಾಸ್ತಾನಿನ ಆಧಾರದ ಮೇಲೆ ವಿತರಣೆ ಮಾಡಲಾಗುತ್ತಿದೆ.



05302
COMMUNITY HEALTH CELL
LIBRARY AND DOCUMENTATION

7) ಸೀರೆ ಮತ್ತು ಪಂಚೆ ಯೋಜನೆಯನ್ವಯ ಪ್ರತಿ ಹಸಿರು ಕಾರ್ಡು ಹೊಂದಿರುವ ಬಡ ಕುಟುಂಬದಲ್ಲಿರುವ 19 ವರ್ಷಕ್ಕೆ ಮೇಲ್ಪಟ್ಟ ಪುರುಷರು ಮತ್ತು ಮಹಿಳೆಯರಿಗೆ ಈ ಅಗ್ಗದ ದರದ ಸೀರೆ ಮತ್ತು ಪಂಚೆಯನ್ನು ಸರಬರಾಜುಮಾಡಲಾಗಿದೆ. ಜಿಲ್ಲೆಯಲ್ಲಿರುವ 2,42,235ಹಸಿರು ಪಡಿತರ ಚೀಟಿಗಳನ್ನು ಹೊಂದಿರುವ ಫಲಾನುಭವಿಗಳ ಪೈಕಿ 19 ವರ್ಷಕ್ಕಿಂತ ಮೇಲ್ಪಟ್ಟಿರುವ 3,36,333 ಗಂಡಸರು ಹಾಗೂ 3,36,089 ಹೆಂಗಸರುಗಳು ಈ ಯೋಜನೆಯನ್ವಯ ಫಲಾನುಭವಿಗಳೆಂದು ಗುರುತಿಸಲಾಗಿದೆ. ಇವರುಗಳಿಗೆ 1989-90ನೇ ಸಾಲಿನಲ್ಲಿ 1,50,300 ಸೀರೆ-ಕುಪ್ಪಸ ಮತ್ತು 1,50,200 ಪಂಚೆ ಷರ್ಟ್‌ಗಳನ್ನು ಹಂಚಲಾಗಿದೆ(ಬೆಲೆ 22,53,000-00)

8) ಜಿಲ್ಲೆಯ ಗ್ರಾಮಾಂತರ ಪ್ರದೇಶಗಳಲ್ಲಿ ಒಟ್ಟು 869 ನ್ಯಾಯಬೆಲೆ ಅಂಗಡಿಗಳಿರುತ್ತೆ. 1989-90ನೇ ಸಾಲಿನಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಹೊಸದಾಗಿ 17 ನ್ಯಾಯಬೆಲೆ ಅಂಗಡಿಗಳಿಗೆ ಮಂಜೂರಾತಿ ನೀಡಲಾಗಿದೆ.

## 25. ಗ್ರಾಮೀಣ ವಿದ್ಯುದ್ದೀಕರಣ

ಜಿಲ್ಲೆಯಲ್ಲಿ 1989-90ನೇ ಸಾಲಿನಲ್ಲಿ 11 ತಾಲ್ಲೋಕುಗಳಲ್ಲಿ1507 ಕುಟುಂಬಗಳಿಗೆ ಪ್ರತಿ ಕುಟುಂಬಗಳಿಗೆ 1 ರಂತೆ 1507 ವಿದ್ಯುತ್‌ದೀಪಗಳನ್ನು ಒದಗಿಸಲಾಯಿತು. ಇದರ ವೆಚ್ಚ ಪ್ರತಿ ದೀಪ 1ಕ್ಕೆ 300-00 ರೂ. ನಂತೆ ಒಟ್ಟು 4,52,100 ರೂ.ಗಳು ಖರ್ಚಾಗಿರುತ್ತದೆ.



# ನಮೂನೆ-1

## ಸದಸ್ಯರುಗಳು

ಜಿಲ್ಲಾ ಪರಿಷತ್, ಮೈಸೂರು

| Year ಸಾಲು | popⁿ ಜನಸಂಖ್ಯೆ 1981ರ ಜನಗಣತಿ ಪ್ರಕಾರ | Total ಒಟ್ಟು ಚುನಾವಣಾ ಕ್ಷೇತ್ರಗಳು | ಮಂಜೂರಾದ ಸಂಖ್ಯೆ ಮೀಸಲಿಟ್ಟಿರುವುದು | | | | ಸಾಲು | ಮಾರ್ಚ್ 31-3-89ಕ್ಕೆ ಇದ್ದ ಒಟ್ಟು ಸಂಖ್ಯೆ | | | | ಜಿಲ್ಲಾ ಪರಿಷತ್‌ಗೆ ಮುಖ್ಯ ಕಾರ್ಯದರ್ಶಿಗಳಿದ್ದಾರೆಯೆ ? |
|---|---|---|---|---|---|---|---|---|---|---|---|---|
| | | | ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ | ಮಹಿಳೆಯರು | ಸಾಮಾನ್ಯ ಸ್ಥಾನ | ಒಟ್ಟು | | ಪರಿಶಿಷ್ಟ ಜಾತಿ ಪರಿಶಿಷ್ಟ ವರ್ಗ | ಮಹಿಳೆಯರು | ಇತರರು | ಒಟ್ಟು | |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1989–90 | 25,95,900 | 64 | 13 | 16 | 35 | 64 | 1989–90 | 12 | 16 | 35 | 63 | ಇದ್ದಾರೆ |
| 1988-89 | ” | 64 | 13 | 16 | 35 | 64 | 1988–89 | 13 | 16 | 35 | 64 | ” |

current year
ವರದಿಯ ವರ್ಷ 1989–90

past year
ಹಿಂದಿನ ವರ್ಷ 1988–89

## ನಮೂನೆ–2

## ಚುನಾವಣೆಗಳು

ಜಿಲ್ಲಾ ಪರಿಷತ್, ಮೈಸೂರು

| ಸಾಲು | ಒಟ್ಟು ಚುನಾವಣೆಗಳು | | ಸ್ಪರ್ಧಿಸದೇನಡೆದಚುನಾವಣೆಗಳು | | ಒಟ್ಟು ತೆರವಾದ ಸ್ಥಾನಗಳು | | ಸ್ಪರ್ಧೆ ನಡೆದ ಚುನಾವಣೆಗಳು | | | ಪ್ರತಿಶತ ಕಾಲಂ ನಂ. (10) ಕಾಲಂ ನಂ. (9)ಕ್ಕೆ | ಷರಾ |
|---|---|---|---|---|---|---|---|---|---|---|---|
| | ಮೀಸಲಿಟ್ಟಿರುವುದು | ಮಿಸಲಿಲ್ಲದೆ ಇರುವುದು | ಮೀಸಲಿಟ್ಟಿರುವುದು | ಮೀಸಲಿಲ್ಲದೆ ಇರುವುದು | ಮೀಸಲಿಟ್ಟಿರುವುದು | ಮೀಸಲಿಲ್ಲದಿರುವುದು | ಒಟ್ಟು ಸ್ಪರ್ಧಿಗಳು | ಒಟ್ಟು ಮತಗಳು | ಗಳಿಸಿದ ಮತಗಳು | | |
| 1 | 2 | 3 | 4 | 5 | 6 | 7 | 8 | 9 | 10 | 11 | 12 |
| 1989–90 | 1 | — | — | — | ಹಂಗಳ ಮೀಸಲು ಕ್ಷೇತ್ರ | — | ಚುನಾವಣೆ ನಡೆದಿರುವುದಿಲ್ಲ | | | — | — |
| 1988–89 | | ಚುನಾವಣೆಗಳು ನಡೆದಿರುವುದಿಲ್ಲ | | | | | | | | | |

## ನಮೂನೆ–3

## ಸಭೆಗಳು

ಜಿಲ್ಲಾ ಪರಿಷತ್, ಮೈಸೂರು

| ಸಾಲು | ಕರೆಯಲಾದ ಸಭೆಗಳ ಸಂಖ್ಯೆ | | | | ಪ್ರತಿ ಸಭೆಗೆ ಹಾಜರಾದ ಸದಸ್ಯರುಗಳ ಸರಾಸರಿ | | ಸರಾ |
|---|---|---|---|---|---|---|---|
| | ಸಾಮಾನ್ಯ | ವಿಶೇಷ | ಕೋರಂ ಬೇಕಾಗಿ ಮುಂದೂಡಿದವು | ಕಾಲ ಅಥವಾ ಇನ್ನಿತರ ಕಾರಣಗಳಿಗೆ ಮುಂದೂಡಿದವು | ಅಧಿಕಾರಿಗಳು | ಅಧಿಕಾರೇತರರು | |
| 1 | 2 | 3 | 4 | 5 | 6 | 7 | 8 |
| 1989–90 | 14 | 4 | 2 | 1 | ಶೇ. 100 | ಶೇ. 85 | — |
| 1988–89 | 13 | 3 | 1 | — | ಶೇ. 100 | ಶೇ. 85 | — |

## ನಮೂನೆ–4

## ಸಮಿತಿಗಳು

ಜಿಲ್ಲಾ ಪರಿಷತ್, ಮೈಸೂರು

| ಕ್ರಮ ಸಂಖ್ಯೆ | ಸಮಿತಿಯ ಹೆಸರು | ಸಮಿತಿಯು ನಡೆಸಿದ ಸಭೆಯ ಉದ್ದೇಶ | ಸದಸ್ಯರುಗಳ ಸಂಖ್ಯೆ ಅಧಿಕಾರೇತರರು | ನಡೆದ ಸಭೆಗಳ ಸಂಖ್ಯೆ | ಸರಾಸರಿ ಹಾಜರಿ ಅಧಿಕಾರಿಗಳು | ಸರಾಸರಿ ಹಾಜರಿ ಅಧಿಕಾರೇತರರು | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 1. | ಸಾಮಾನ್ಯ ಸ್ಥಾಯಿ ಸಮಿತಿ | ಸಾಮಾನ್ಯ ಆಡಳಿತ | 6 | 7 | ಶೇ. 100 | ಶೇ. 65 | 3 ಸಭೆಗಳು ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 2. | ಹಣಕಾಸು ಮತ್ತು ಆಡಿಟ್ ಸ್ಥಾಯಿ ಸಮಿತಿ | ಹಣಕಾಸು ಮತು ಲೆಕ್ಕ ಪತ್ರ | 6 | 13 | ಶೇ. 100 | ಶೇ. 80 | — |
| 3. | ಯೋಜನೆ ಮತ್ತು ಅಭಿವೃದ್ಧಿ | ಯೋಜನೆ | 6 | 14 | ಶೇ. 100 | ಶೇ. 90 | ಒಂದು ಸಭೆ ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 4. | ಸಾರ್ವಜನಿಕ ಕಾಮಗಾರಿ ಮತ್ತು ಸೌಲಭ್ಯಗಳು | ಕಾಮಗಾರಿ | 6 | 21 | ಶೇ. 100 | ಶೇ. 80 | 8 ಸಭೆಗಳು ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 5. | ಸಾಮಾಜಿಕ ನ್ಯಾಯ | ಪರಿಶಿಷ್ಟ ಜಾತಿ ಮತ್ತು ಪಂಗಡಗಳು, ಹಿಂದುಳಿದ ವರ್ಗಗಳ, ಗಿರಿಜನರ ಕಲ್ಯಾಣ | 6 | 12 | ಶೇ. 100 | ಶೇ. 80 | ಒಂದು ಸಭೆ ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 6. | ಶಿಕ್ಷಣ | ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ | 6 | 12 | ಶೇ. 100 | ಶೇ. 60 | 3 ಸಭೆಗಳು ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |

ಮುಂದುವರೆದಿದೆ

| ಕ್ರಮ ಸಂಖ್ಯೆ | ಸಮಿತಿಯ ಹೆಸರು | ಸಮಿತಿಯು ನಡೆಸಿದ ಸಭೆಯ ಉದ್ದೇಶ | ಸದಸ್ಯರುಗಳ ಸಂಖ್ಯೆ ಅಧಿಕಾರೇತರರು | ನಡೆದ ಸಭೆಗಳ ಸಂಖ್ಯೆ | ಸರಾಸರಿ ಹಾಜರಿ ಅಧಿಕಾರಿಗಳು | ಸರಾಸರಿ ಹಾಜರಿ ಅಧಿಕಾರೇತರರು | ಷರಾ |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| 7. | ವ್ಯವಸಾಯ ಮತ್ತು ಪಶು ಸಂಗೋಪನೆ | ವ್ಯವಸಾಯ ಮತ್ತು ಪಶುಸಂಗೋಪನೆ | 6 | 9 | ಶೇ. 100 | ಶೇ. 70 | 1 ಸಭೆ ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 8. | ಆರೋಗ್ಯ | ಸಾರ್ವಜನಿಕ ಆರೋಗ್ಯ | 6 | 9 | ಶೇ. 100 | ಶೇ. 70 | 1 ಸಭೆ ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 9. | ಕೈಗಾರಿಕೆ | ಗ್ರಾಮೀಣ ಕೈಗಾರಿಕೆ | 6 | 9 | ಶೇ. 100 | ಶೇ. 70 | 2 ಸಭೆಗಳು ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |
| 10. | ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ ಉಪಸಮಿತಿ | ಮಹಿಳೆಯರ ಮತ್ತು ಮಕ್ಕಳ ಕಲ್ಯಾಣ | 16 | 9 | ಶೇ. 100 | ಶೇ. 65 | 1 ಸಭೆ ಕೋರಂ ಇಲ್ಲದ ಕಾರಣ ಮುಂದೂಡಲಾಯಿತು. |

## ನಮೂನೆ–5

### ರಸ್ತೆ

ವರ್ಷದ ಕೊನೆಯಲ್ಲಿದ್ದ ಉದ್ದ (ಕಿ.ಮೀ. ನಲ್ಲಿ) ಇಂಜಿನಿಯರಿಂಗ್ ವಿಭಾಗ

| ವರ್ಷ | ಹೊಸದಾಗಿ ತೆರೆದದ್ದು (ಕಿ.ಮೀ) | ಕಾಂಕ್ರೀಟ್ | ಬಿಟಿಯಸ್ ಅಥವಾ ಟಾರ್ | ಜಲ್ಲಿ ಬಿಚಾವಣೆ | ಯಾವುದಾದರೂ ಇತರೆ ರೀತಿ | ಒಟ್ಟು (ಕಾಲಂ 3 ರಿಂದ 6) |
|---|---|---|---|---|---|---|
| 1989–90 | 680 | — | 523 | 3398 | 1695 | 5616 |
| 1988–89 | — | — | 606 | 2260 | 4388 | 7254 |

## ನಮೂನೆ–6

## ಸೇತುವೆಗಳು, ಕಾಸವೆಗಳು ಮತ್ತು ನೋರಿಗಳು

ಇಂಜಿನಿಯರಿಂಗ್ ವಿಭಾಗ (ಲಕ್ಷರೂಗಳಲ್ಲಿ)

| ವರ್ಷ | ನಿರ್ಮಾಣಗಳ ಮೇಲೆ ಖರ್ಚು ಮಾಡಿದ ಹಣ | | | | ಯಾವುದರಿಂದ ಹಣ ಖರ್ಚು ಮಾಡಿದೆ | | |
|---|---|---|---|---|---|---|---|
| | ಸೇತುವೆಗಳು ಮತ್ತು ಕಾಸವೆಗಳು | ನೋರಿಗಳು | ಒಟ್ಟು | ದತ್ತಿಗಳು ಮತ್ತು ಕಾಣಿಕೆಗಳು | ಸರ್ಕಾರದ ಅನುದಾನಗಳು | ಸಾಲಗಳು | ಕಂದಾಯ ಲೆಕ್ಕಗಳು |
| 1 | 2 | 3 | 4 | 5 | 6 | 7 | 8 |
| 1989–90 | 10·96 | 2.70 | 13·66 | — | 13·80 | — | — |
| 198 –89 | 13 [illegible]8 | 2·23 | 15·31 | — | 15·31 | — | — |

ಮುಂದುವರಿದಿದೆ

ಈ ವರ್ಷದಲ್ಲಿನ ಖರ್ಚು (ಲಕ್ಷ ರೂ. ಗಳಲ್ಲಿ)

| ಹೊಸ ನಿರ್ಮಾಣ | | | | ನಿರ್ವಹಣೆ | | | | | |
|---|---|---|---|---|---|---|---|---|---|
| ಕಾಂಕ್ರೀಟ್ | ಬಿ.ಟಿ.ಎಸ್. ಅಥವಾ ಟಾರ್ | ಜಲ್ಲಿ ಬಿಚಾವಣೆ | ಯಾವುದಾದರೂ ಇತರೆ ರೀತಿ | ಕಾಂಕ್ರೀಟ್ | ಬಿ.ಟಿ.ಎಸ್ ಅಥವಾ ಟಾರ್ | ಜಲ್ಲಿ ಬಿಚಾವಣೆ | ಯಾವುದಾದರೂ ಇತರೆ ರೀತಿ | ನಿರ್ವಹಣೆ ಒಟ್ಟು ಖರ್ಚು ಕಾಲಂ 12 ರಿಂದ 15 | ಪ್ರತಿ ಕಿ. ಮೀ. ಗೆ ನಿರ್ವಹಣಾ ವೆಚ್ಚ (ಲಕ್ಷರೂ.ಗಳಲ್ಲಿ) |
| 9 | 10 | 11 | 12 | 13 | 14 | 15 | 16 | 17 | 18 |
| — | 8·02 | 40·20 | 2·75 | — | 6·95 | 74·00 | 28·54 | 109·49 ಕಿ. ಮೀ. ಗ್ಕೆರೂ. (ಜಿಲ್ಲಾ ರಸ್ತೆಗೆ) | 1600–00 |
| — | 9·96 | 21·29 | — | — | — | 73·05 | 70·56 | 143·69 (ಇತರೆ ಹಳ್ಳಿ ರಸ್ತೆ) ಕಿ. ಮೀ. ಗೆ ರೂ. | 900–00 |

# ನಮೂನೆ–7

## ವಿಶ್ರಾಂತಿ ಗೃಹಗಳು ಮತ್ತು ಛತ್ರಗಳು

| ವರ್ಷ | ಸಂಖ್ಯೆ | ವಿಶ್ರಾಂತಿ ಗೃಹಗಳು–ವಸೂಲಿ ಮಾಡಿದ ಬಾಡಿಗೆ | | | ಛತ್ರಗಳು ವಸೂಲಿ ಮಾಡಿದ ಬಾಡಿಗೆ |
|---|---|---|---|---|---|
| | | ಮೊತ್ತ | ರೂ. | ಸಂಖ್ಯೆ | |
| 1989–90 | 13 | 20,175-00 | — | — | 1,338-00 |
| 1988–89 | 13 | 18,361–00 | — | 1 | 1,080–00 |

## ನಮೂನೆ-8 (ಅ)

## ಶಿಕ್ಷಣ ಹಿರಿಯ ಪ್ರಾಥಮಿಕ ಶಾಲೆ—ಸಂಖ್ಯಾಬಲ

| ವರ್ಷ | ಶಾಲೆಗಳ ಸಂಖ್ಯೆ | | ಜಿಲ್ಲಾ ಪರಿಷತ್‌ನ ಹಿರಿಯ ಪ್ರಾಥಮಿಕ ಶಾಲೆ ಸಂಖ್ಯಾಬಲ | | ಇತರೆ ಶಾಲೆಗಳಲ್ಲಿರುವ ಸಂಖ್ಯಾಬಲ | | ಎಲ್ಲಾ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ | | ಷರಾ |
|---|---|---|---|---|---|---|---|---|---|
| | ಜಿಲ್ಲಾ ಪರಿಷತ್ | ಇತರೆ | ಹುಡುಗರು | ಹುಡುಗಿಯರು | ಹುಡುಗರು | ಹುಡುಗಿಯರು | ಹುಡುಗರು | ಹುಡುಗಿಯರು | |
| 1 | 2 | 3 | 4 | 5 | 6 | 7 | 8 | 9 | 10 |
| 1989–90 | 2,336 | 327 | 2,37,402 | 1,27,860 | 26,302 | 22,418 | 2,63,704 | 1,50,278 | — |
| 1988–89 | 2,336 | 327 | 2,37,216 | 1,27,733 | 25,519 | 22,113 | 2,62,285 | 1,49,846 | — |

## ನಮೂನೆ-8 (ಆ)

## ಶಿಕ್ಷಣ ಪ್ರೌಢಶಾಲೆ—ಸಂಖ್ಯಾಬಲ

| ವರ್ಷ | ಶಾಲೆಗಳ ಸಂಖ್ಯೆ | | ಜಿಲಾ ಪರಿಷತ್‌ನ ಶಾಲೆಗಳಲ್ಲಿರುವ ಸಂಖ್ಯಾಬಲ | | ಇತರೆ ಶಾಲೆಗಳಲ್ಲಿರುವ ಸಂಖ್ಯಾಬಲ | | ಎಲ್ಲಾ ಶಾಲೆಗಳ ವಿದ್ಯಾರ್ಥಿಗಳ ಸಂಖ್ಯೆ | | ಷರಾ |
|---|---|---|---|---|---|---|---|---|---|
| | ಜಿಲ್ಲಾ ಪರಿಷತ್ | ಇತರೆ | ಹುಡುಗರು | ಹುಡುಗಿಯರು | ಹುಡುಗರು | ಹುಡುಗಿಯರು | ಹುಡುಗರು | ಹುಡುಗಿಯರು | |
| 1 | 2 | 3 | 4 | 5 | 6 | 7 | 8 | 9 | 10 |
| 1989–90 | 148 | 142 | 31,890 | 18,835 | 20,919 | 12,505 | 52,809 | 31,340 | — |
| 1988–89 | 116 | 124 | 25,179 | 13,192 | 14,384 | 10,167 | 40,063 | 23,389 | — |

## ನಮೂನೆ–9

| ಕ್ರಮ ಸಂಖ್ಯೆ | ಆಸ್ಪತ್ರೆ ಹೆಸರು | ಸಿಬ್ಬಂದಿ ವೆಚ್ಚ | 89-90ನೇ ಸಾಲಿನಲ್ಲಿ ಜಿಲ್ಲಾ ಪರಿಷತ್‌ನಿಂದ ವೆಚ್ಚವಾದ ಅನುದಾನ | | | | | | | | |
|---|---|---|---|---|---|---|---|---|---|---|---|
| | | | ಬಾಡಿಗೆ | ಪೀಠೋಪಕರಣ ಮತ್ತು ಸಲಕರಣೆ | ಒಳರೋಗಿಗಳ ಊಟದ ವ್ಯವಸ್ಥೆ | ಹಾಸಿಗೆ ಮತ್ತು ಬಟ್ಟೆ ಬರೆಗಳು | ಸಾದಿಲ್ವಾರು ವೆಚ್ಚ ಮತ್ತು ಸಾಧನೆ | ಹೊಸ ಕಟ್ಟಡಗಳ ನಿರ್ಮಾಣ ರಿಪೇರಿ | ಔಷಧಿಗಳು | ಒಟ್ಟು ಮೊತ್ತ | |
| 1 | 2 | 3 | 4 | 5 | 6 | 7 | 8 | 9 | 10 | 11 | 12 (10+11) |
| 1989–90 | — | 718.20 | 0·11 | 2·91 | 5.77 | 2·13 | 3.50 | 13·93 | 2·96 | 67·57 | 70·53 |
| 1988–89 | — | 545·63 | 0·26 | 2·10 | 4.82 | 1·72 | 4·06 | 36·34 | 861 | 861 | — |

| ಚಿಕಿತ್ಸೆ ಪಡೆದ ರೋಗಿಗಳ ವಿವರ ಒಳರೋಗಿಗಳು | | ಹೊರರೋಗಿಗಳು | | ಒಟ್ಟು | | ಸಂಸ್ಥೆಗಳಿಗೆ ವೆಚ್ಚವಾದ ಒಟ್ಟು ಮೊತ್ತ | | | ಒಬ್ಬ ಒಳರೋಗಿಗೆ ವೆಚ್ಚವಾದಹಣ | |
|---|---|---|---|---|---|---|---|---|---|---|
| ಹೋದ ವರ್ಷ 88-89 | ವರದಿ ವರ್ಷ 89-90 | ಹೋದ ವರ್ಷ 88-89 | ವರದಿ ವರ್ಷ 89-90 | ಹೋದ ವರ್ಷ 88-89 | ವರದಿ ವರ್ಷ 89-90 | ಸರಾಸರಿ ದಿನಕ್ಕೆ ಚಿಕಿತ್ಸೆ ಪಡೆದವರ ಸಂಖ್ಯೆ | ವರದಿ ವರ್ಷ 89-90 | ಹಿಂದಿನ ವರ್ಷ 88-89 | ವರದಿ ವರ್ಷ 89-90 | ಹೋದ ವರ್ಷ 88-89 |
| 13 | 14 | 15 | 16 | 17 (12+14) | 18 (13+15) | 19 | 20 | 21 | 22 (13+19) | 23 |
| 8615 | 244100 | 536844 | 1035480 | 545459 | 1279480 | 350569 | 817·08 (ಲಕ್ಷಗಳಲ್ಲಿ) | 558·59 (ಲಕ್ಷಗಳಲ್ಲಿ) | 334·73 (ಲಕ್ಷಗಳಲ್ಲಿ) | 102·02 (ಲಕ್ಷಗಳಲ್ಲಿ) |

# ನಮೂನೆ-10

## ಮೊಕದ್ದ ಮೆಗಳು

| ಪ್ರಾರಂಭದ ಶುಲ್ಕ | ಜಮ | ಒಟ್ಟು | ವಿಧಿಸಿದ ದಂಡ ಗಳ ಸಂಖ್ಯೆ | ಮೊತ್ತ | ಶಿಕ್ಷೆಗೊಳ ಪಟ್ಟ ಸಂಖ್ಯೆ | ಮೊತ್ತ | ಸರ್ಕಾರದಲ್ಲಿ ಇತ್ಯರ್ಥ ನಡೆಸಿದ ಸಂಖ್ಯೆ | ಬಾಕಿ ಇರುವ ಸಂಖ್ಯೆ | ವಾಪಸ್ಸು ಪಡೆದ ಸಂಖ್ಯೆ | ದೋಷಮುಕ್ತ ವಾದ ಸಂಖ್ಯೆ | ಇತ್ಯರ್ಥವಾದ ಒಟ್ಟು ಸಂಖ್ಯೆ | ಮೊತ್ತ | ಷರಾ |
|---|---|---|---|---|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1989–90 | | | | | | | ಇಲಾ | | | | | | |
| 1988–89 | | | | | | | ಇಲ್ಲಾ | | | | | | |

## ನಮೂನೆ–11

### (ಕೇಸುಗಳು)

| ಕ್ರಮ ಸಂಖ್ಯೆ | ಪ್ರಕರಣದ ಹೆಸರು | ನ್ಯಾಯಾಲಯದ ಹೆಸರು | ಕೇಸಿಗೆ ಸಂಬಂಧಿಸಿದ ಪಾರ್ಟಿಗಳು | | ಪ್ರಕರಣ ದಾಖಲಾದ ದಿನಾಂಕ | ಕೇಸಿನ ಸ್ವಭಾವ | ಪ್ರಸಕ್ತಸಾಲಿನಲ್ಲಿ ಕೇಸು ತೀರ್ಮಾನವಾಗಿದ್ದರೆ ತೀರ್ಮಾನ | ತೀರ್ಮಾನವಾಗಿಲ್ಲದಿದ್ದರೆ ಕೇಸು ಯಾವ ಹಂತದಲ್ಲಿದೆ |
|---|---|---|---|---|---|---|---|---|
| | | | ವಾದಿ | ಪ್ರತಿವಾದಿ | | | | |
| 1 | 2 | 3 | 4 | 5 | 6 | 7 | 8 | 9 |
| 1989–90 | | | | ಯಾವುದೂ ಇರುವುದಿಲ್ಲ | | | | |
| 1990–91 | | | | ಯಾವುದೂ ಇರುವುದಿಲ್ಲ | | | | |

## ನಮೂನೆ-12

## ಬಂಡವಾಳಗಳು

| ಯಾವ ರೀತಿಯ ಬಂಡವಾಳ | ಬಂಡವಾಳದಲ್ಲಿ ತೊಡಗಿಸಿದ ಮೊತ್ತ | ವಾಪಸ್ಸು ಪಡೆದಿದ್ದು | ಪ್ರಾರಂಭದ ಶಿಲ್ಕು | ಅಖೈರು ಶಿಲ್ಕು |
|---|---|---|---|---|
| 1989–90 | | ಇಲ್ಲಾ | | |
| 1988–89 | | ಇಲ್ಲಾ | | |

## ನಮೂನೆ-13

### ಸಾಲಗಳು

| ಕ್ರಮ ಸಂಖ್ಯೆ | ಪ್ರತಿಸಾಲದ ಉದ್ದೇಶ ಕರಾರು ಮತ್ತು ಯಾವ ವರ್ಷದಲ್ಲಿ ತೆರೆಯಲಾಗಿದೆ | ಯಾವ ಕೆಲಸಕ್ಕೆ ಸಾಲ ಮಂಜೂರಾಯಿತೋ ಆ ಕೆಲಸದ ಒಟ್ಟು ವೆಚ್ಚ | ಖರ್ಚಿನ ಭಾಗದಲ್ಲಿ ಧನಾದೇಶವಾಗಿ ಪರಿಗಣಿಸಲ್ಪಟ್ಟದ್ದು ಯಾವುದಾದರೂ ಇದ್ದಲ್ಲಿ | ಒಟ್ಟು ಸಾಲ ಮತ್ತು ಬಡ್ಡಿಯ ದರ | |
|---|---|---|---|---|---|
| | | | | ಮೊತ್ತ | ಬಡ್ಡಿಯ ದರ |
| 1 | 2 | 3 | 4 | 5 | 6 |
| 1989-90 | | | ಇಲ್ಲಾ | | |
| 1988-89 | | | ಇಲ್ಲಾ | | |

| ಪ್ರತಿ ಸಾಲವನ್ನು ಮಂಜೂರು ಮಾಡಿದ ಸರ್ಕಾರದ ಆದೇಶ | | ಪಾವತಿಸಿದ ಮೊಬಲಗು | | | | | | ಬಾಕಿ ಇನ್ನು ಉಳಿದಿರುವುದು | | ಷರಾ |
|---|---|---|---|---|---|---|---|---|---|---|
| | | ವರದಿ ವರ್ಷದಲ್ಲಿ | | ಕಳೆದ ವರ್ಷ ಕೊನೆಯವರೆಗೆ | | ಒಟ್ಟು | | | | |
| ನಂ. | ದಿನಾಂಕ | ಬಡ್ಡಿ | ಅಸಲು | ಬಡ್ಡಿ | ಅಸಲು | ಬಡ್ಡಿ | ಅಸಲು | ಬಡ್ಡಿ | ಅಸಲು | |
| 7 | 8 | 9 | 10 | 11 | 12 | 13 | 14 | 15 | 16 | 17 |
| 1989-90 | | | | | | | | ಇಲ್ಲಾ | | |
| 1988-89 | | | | | | | | ಇಲ್ಲಾ | | |

## ನಮೂನೆ-14

ಜಿಲ್ಲಾ ಪರಿಷತ್, ಮೈಸೂರು

### 1989-90ರ ವಾರ್ಷಿಕ ಜಮಾ ಮತ್ತು ಖರ್ಚಿನ ಘೋಷ್ವಾರೆ

(ಲಕ್ಷ ರೂ. ಗಳಲ್ಲಿ)

| | ಜಿಲ್ಲಾ ಪರಿಷತ್‌ನ ಸಾಮಾನ್ಯ ಆದಾಯ | ಸರ್ಕಾರದಿಂದ ಬಂದಂತಹ ಅನುದಾನ | ಇತರೆ ವಿಶೇಷವಾದ ಮತ್ತು ಅಮಾನತ್ | ಒಟ್ಟು |
|---|---|---|---|---|
| ಆರಂಭ ಶಿಲ್ಕು (1–4–89ರಂತೆ) | 1739·530 | — | — | 1739·530 |
| 1989–90ರ ಸಾಲಿನ ಜಮಾ | 1610·396 | 8209·640 | — | 9820·036 |
| ಒಟ್ಟು | 3349·926 | 8209·640 | — | 11559·566 |
| 1988–89ರಲ್ಲಿ ಆದ ಖರ್ಚು | — | — | — | 9869·700 |
| ಆಖೈರು ಶಿಲ್ಕು (31–3–90) | — | — | — | 1689·866 |

# ನಮೂನೆ-15

1989-90ನೇ ಸಾಲಿಗೆ ಮಂಡಲ ಪಂಚಾಯಿತಿಗಳಿಗೆ ಸಂಬಂಧಪಟ್ಟ ವಿವರಗಳು

ಜಿಲ್ಲಾ ಪರಿಷತ್, ಮೈಸೂರು ವರ್ಗ-1

ಎ) ಸಿಬ್ಬಂದಿ ವರ್ಗದ ಸಂಬಳಗಳ ವಿವರ

ಬಿ) ಮಂಡಲ ಪಂಚಾಯತಿಗಳು 1

ಆಯವ್ಯಯ (ಲಕ್ಷ ರೂ.ಗಳಲ್ಲಿ) (ಖರ್ಚು ವಿವರ ಲಕ್ಷರೂಗಳಲ್ಲಿ)

| | | | |
|---|---|---|---|
| 1) ಆರಂಭ ಶಿಲ್ಕು | 140·372 | 1) ವಿದ್ಯುಚ್ಛಕ್ತಿ | 65.933 |
| 2) ತಲಾನುದಾನ | 150·037 | 2) ಚುನಾಯಿತ ಸದಸ್ಯರ ವೇತನ | 12·722 |
| 3) ವಸೂಲಾದ ಕಂದಾಯ | 126·785 | 3) ಸಭೆಯ ಖರ್ಚು | — |
| 4) ಇತರೆ ಜಮ | | 4) ಇತರೆ ಸಿಬ್ಬಂದಿಗಳ ವೇತನ | 54.224 |
| | | 5) ಸಾಧಿಲ್ವಾರು | 7.514 |
| | | 6) ಕಾಮಗಾರಿಗಳ ಖರ್ಚು | 184.225 |
| | | 7) ಅಂತಿಮ ಶಿಲ್ಕು | 92·576 |
| ಒಟ್ಟು | 417·194 | ಒಟ್ಟು | 417.194 |

